# ಸ್ವಾತಂತ್ರ್ಯ-ಘರ್ಜನೆ

(ಸಿಂಹ)

[ಐತಿಹಾಸಿಕ ನಾಟಕ]

—ಜಿ. ಸದಾಶಿವಯ್ಯ
ದೇಶೀಯ ವಿದ್ಯಾಶಾಲಾ, ಬೆಂಗಳೂರು ೪

ಪ್ರಕಾಶಕರು
ಆನಂದ್ ಬ್ರದರ್ಸ್ - ಬೆಂಗಳೂರು ೨

ಮೊದಲನೆಯ ಮುದ್ರಣ—" ರಂಗಭೂಮಿ "-1930
ಎರಡನೆಯ ಮುದ್ರಣ—ಅಕ್ಟೋಬರ್ 1950

---

**ಆಧಾರ ವಸ್ತು**

" ನೆಮ್ಮದಿಯಾದ ನೆಲೆಯನ್ನರಸುತ್ತಾ ಬಂದ ಆರ್ಯರು ಆರ್ಯಾವರ್ತದಲ್ಲಿ ತಮ್ಮ ರಾಜ್ಯಗಳನ್ನು ಕಟ್ಟುತ್ತಾ ನುಗ್ಗಿದ ರಭಸದ ಅನೇಕ ಅನಾರ್ಯ ಪಾಳೆಯಗಳನ್ನು ತುಳಿದು ಮೆಟ್ಟಿದರು— "

" ಬ್ರೀಫ್ ಹಿಸ್ಟರಿ ಆಫ್ ದಿ ಇಂಡಿಯನ್ ಪೀಪಲ್ "ನಲ್ಲಿ
ಸರ್ ವಿಲಿಯಂ ಹಂಟರ್.

---



**ಬೆಲೆ : ೦-೮-೦**

ಮುದ್ರಕರು :
**ಬಿ. ಎಂ. ಬೈರಪ್ಪ**
ಶ್ರೀ ಯೋಗಿನಾಥ್ ಪ್ರಿಂಟಿಂಗ್ ವರ್ಕ್ಸ್,
146/3 ೨ನೇ ಬೀದಿ, ಚಾಮರಾಜಪೇಟೆ, ಬೆಂಗಳೂರು ೨.

ನನ್ನ ನಾಟಕ ರಚನೆಯ ಪ್ರಾರಂಭದಲ್ಲಿ ಅವುಗಳ ರಚನೆಯಲ್ಲಿ ಮತ್ತು
ಪ್ರದರ್ಶನದಲ್ಲಿ ಅಭಿಮಾನದಿಂದ ನೆರವಾಗಿ ಉತ್ತೇಜನಕೊಟ್ಟ
ಶ್ರೀ ಕೆ. ಸಂಪದ್ಗಿರಿರಾವ್ ಎಂ.ಎ , ಯವರಿಗೂ
ಶ್ರೀ ಬಿ. ಎಸ್. ರಾಮರಾವ್ ಬಿ.ಎ.,
ಯವರಿಗೂ ಈ ಪುಟ್ಟನಾಟಕವನ್ನು
ವಿಶ್ವಾಸದ ಕಾಣಿಕೆಯಾಗಿ
ಸಮರ್ಪಿಸಿದ್ದೇನೆ

—**ಸದಾಶಿವ**

1930ರಲ್ಲಿ ಮೊಟ್ಟಮೊದಲು ಈ ನಾಟಕವನ್ನು ದೇಶೀಯ ವಿದ್ಯಾಶಾಲೆಯ ಹಿರಿಯ ತರುಣ ಸಂಘದವರು ಶಾಲೆಯ ಸಭಾಂಗಣದಲ್ಲಿ ಅಭಿನಯಿಸಿದಂದು ಪಾತ್ರ ವಹಿಸಿದ್ದವರು :

| ಪಾತ್ರಗಳು | ವಿವರ | ನಟರು |
|---|---|---|
| ೧ ಮಯೂರವರ್ಮ | ಆರ್ಯರಾಜ | ಶ್ರೀ ಎಸ್. ರಂಗರಾವ್, B A , |
| ೨. ಇಂದ್ರಸೇನ | ಮಯೂರನ ಸೇನಾನಿ | ,, ಟಿ. ಸದಾಶಿವಯ್ಯ |
| ೩. ಜಬಲ (ರಾವಲ) | ,, ಕೋಶಾಧಿಕಾರಿ | ,, ಅ ನ ಕೃಷ್ಣರಾಯ |
| ೪ ಸಿಂಹ ,, | ಜಬಲನ ಮಗ | ,, ಟಿ ತಾತಾಚಾರ್, M.Sc., |
| ೫. ಸೋನ ,, | ಸಿಂಹನ ಗೆಳೆಯ | ,, ಎಂ. ಎ. ಶ್ರೀರಾಂ M Sc., |
| ೬. ಭೀಮ ,, | ರಾವಲಸಾಧು ಮತ್ತು ಕವಿ | ,, ಜಿ. ವಿ. ರಾಮಾಚಾರ್, B.A , B L., |
| ೭ ಗಂಡಿ ,, | ಜಬಲನ ಮಿತ್ರ (ದ್ರೋಹಿ) | ,, ಎಸ್. ವೆಂಕಟಾಚಲಪತಿ |

## ದೃಶ್ಯ ೧

[ಕಾಡುದಾರಿ-ಸಿಂಹನೂ, ಸೋನನೂ ಬರುವರು]

**ಸೋನ**—ಸ್ವತಂತ್ರರಾವಲರನ್ನು ಬಡಿದು ಮೆಟ್ಟಿರುವರಲ್ಲಾ! ಈ ಪಾಪಿಗಳು!

**ಸಿಂಹ**—ವೀರಬಂಡನ ಕುಲದರಾವಲರು, ಕವಣೆಗಲ್ಲಿನಿಂದ ನಕ್ಷತ್ರ ಗಳನ್ನು ನೆಲಕ್ಕುರುಳಿಸುತ್ತಿದ್ದ ರಾವಲರು, ಭಿಲ್ಲಗೊಂಡೋಲರ ಎದೆಯನ್ನು ನಡುಗಿಸುತ್ತಿದ್ದ ರಾವಲರು, ಹುಲಿ ಸಿಂಹಗಳನ್ನು ಗುಡಿಸಿಲ ಕಾವಲಿಗಿಟ್ಟು ಮೆರೆಯುತ್ತಿದ್ದ ರಾವಲರು, ಶತದ್ರುವಿನ ಆರ್ಯರನ್ನು ಮೊಲಗಳಂತೆ ಬೇಟೆ ಯಾಡಿ ಸೋಲಿಸಿದ ರಾವಲರು ಈಗ ಈ ದುಸ್ಥಿತಿಗೆ! ಬಂದಿರುವರಲ್ಲಾ!

**ಸೋನ**—ಸಿಂಹ! ಮೊನ್ನೆ ರಾತ್ರಿಯಲ್ಲಿ ನಡೆದ ಸಂಗತಿಯನ್ನು ಕೇಳಿದೆಯೋ?

**ಸಿಂಹ**—ಇಲ್ಲವಲ್ಲ-ಏನು ಹೇಳು?

**ಸೋನ**—ಎಡಮೂರಿನ ರಾವಲನೊಬ್ಬನು ದಾರಿಯಲ್ಲಿ ಬರುತ್ತಿರು ವಾಗ ಈ ರಾಜ-ಮಯೂರವರ್ಮನು ಗುಡ್ಡದಮೇಲೆ ತನ್ನ ಗುಡಿಸಿಲ ಮುಂಭಾಗದಲ್ಲಿ ನಿಂತಿದ್ದನಂತೆ. ಇವನ ವೇಷವನ್ನು ನೋಡುತ್ತಾ ನಿಂತಿದ್ದ ಅವನನ್ನು ಕಂಡು, ದೊರೆಗೆ ಕೋಪವುಂಟಾಗಿ, ಅವನನ್ನು ಹಿಡಿಸಿ ನರ್ಮದಾ ನದಿಗೆ ಎಸೆಯುವಂತೆ ಅಪ್ಪಣೆ ಮಾಡಿದನಂತೆ.

**ಸಿಂಹ**—ಯಾವ ಅಪರಾಧಕ್ಕಾಗಿ?

**ಸೋನ**—ದೊರೆಯನ್ನು ನೋಡಿದ ಅಪರಾಧಕ್ಕಾಗಿ.

**ಸಿಂಹ**—ಇದು ನಿಜವೇ?

**ಸೋನ**—ಸತ್ಯವಾಗಿಯೂ ಸಿಂಹ!-ಇದೇರೀತಿಯಲ್ಲಿ ತನ್ನ ಮನ ಬಂದಂತೆ ನಮ್ಮವರನ್ನು ಹಿಡಿದು ಚಿತ್ರಹಿಂಸೆಪಡಿಸುತ್ತಿರುವನು.

**ಸಿಂಹ**—ಎಂತಹ ದುರ್ಗತಿ ಬಂದಿತು !

**ಸೋನ**—ನಮ್ಮ ತಾತ ಮುತ್ತಾತಂದಿರು ಹಾಕಿ ಬೆಳೆಯಿಸಿರುವ ಈ ಹಣ್ಣು ಗಿಡಗಳನ್ನು ಯಾವ ರಾವಲನೂ ಮುಟ್ಟಕೂಡದೆಂದೂ, ಆ ರೀತಿ ಮುಟ್ಟಿದರೆ ಅವನ ಕೈಗಳನ್ನು ಕತ್ತರಿಸಬೇಕೆಂದೂ, ಮೊನ್ನೆ ಇಂದ್ರಸೇನನಿಗೆ ಅಜ್ಞೆಮಾಡಿ, ಅಲ್ಲಲ್ಲಿ, ತನ್ನ ಪರಿವಾರದ ರಾವಲ ಗುಲಾಮರನ್ನು ಕಾವಲಿಟ್ಟಿರುವನು.

**ಸಿಂಹ**—ರಾವಲ ಗುಲಾಮರು! ಹಾಗೆಂದರೇನು ಸೋನ ? ರಾವಲರು ಗುಲಾಮರೇ ?

**ಸೋನ**—ಅಲ್ಲದಿನ್ನೇನು ? ತಮ್ಮವರನ್ನು ಹಿಡಿದು ಎರಡನೆಯವನಿಗೆ ಒಪ್ಪಿಸಲು ನಿಂತಿರುವ ಈ ಮೃಗಗಳನ್ನು ಗುಲಾಮರೆನ್ನಬೇಕೋ, ಹಂದಿಗಳೆನ್ನಬೇಕೋ ?

**ಸಿಂಹ**—ಈ ಕೆಲಸ ಮಾಡಲಿಕ್ಕೆ ನಮ್ಮ ರಾವಲ ಸೋದರರೊಪ್ಪಿದರೆ?

**ಸೋನ**—ಒಪ್ಪದೆ ಏನು ಸಿಂಹ! ನಿಮ್ಮ ತಂದೆಯೋ ದೊರೆಗೆ ಕೋಶಾಧಿಕಾರಿಯಾಗಿದ್ದುಕೊಂಡು ಆ ಆರ್ಯರು ಕುಡಿಯುವ ಅದೆಥಂಹುದು ?....

**ಸಿಂಹ**—ಸೋಮ !—

**ಸೋನ**—ಅಲ್ಲ ಅಲ್ಲ....

**ಸಿಂಹ**—ಸುರ !

**ಸೋನ**—ಅಹಂ ! ಆ ಸುರವನ್ನು ಗುಡ್ಡ ಗುಡ್ಡಗಳಲ್ಲೂ ಮಾರಿಸಿ, ತನ್ನ ಸೋದರರಿಗೆ ಅದನ್ನು ಕುಡಿಸಿ ಅವರ ಶಕ್ತಿಯನ್ನೂ, ದವಸ ಧಾನ್ಯವನ್ನೂ ಸೂರೆಮಾಡಿ ಆ ದೊರೆಯ ಮೆಚ್ಚುಗೆಯನ್ನು ಪಡೆಯುತ್ತಿರುವನು.

ಸಿಂಹ—ಆಹಾ! ತಂದೇ! ಆರ್ಯ ರಾಜರನ್ನು ಗುಡ್ಡ ಗುಡ್ಡಗಳಲ್ಲಿ ಬೇಟೆಯಾಡಿ ಹೊಡೆದೋಡಿಸಿದ ಆ ವೀರಬಂಡನ ಮರಿಮಗನೇ ನೀನು ? ಅಲ್ಲ ! ಅಲ್ಲ ? ಆ ಬಂಡನ ರಕ್ತವು ನಿನ್ನ ಎದೆಯಲ್ಲಿದ್ದರೆ ಈ ಪಾಪಕಾರ್ಯಕ್ಕೆ ಕೈಹಾಕಿ ಪರರಾಜನ ಗುಲಾಮನಾಗಿ ನಿನ್ನ ಸೋದರರ ಕತ್ತುಗಳನ್ನು ನೀನೇ ಕಡಿಯುತ್ತಿರಲಿಲ್ಲ.

**ಸೋಣ**—ಆ ಸುರವನ್ನು ಕುಡಿದು-ಕುಡಿದು ಹುಚ್ಚನಂತಾಗಿ ತನ್ನ ನೆಲವನ್ನು ಕಳೆದುಕೊಂಡ ಗಂಡಿಯು ಮೊನ್ನೆ ಅದೇ ಸುರಕ್ಕಾಗಿ ತನ್ನಲ್ಲಿ ಕೊನೆಯದಾಗಿ ಉಳಿದಿದ್ದ ಹಸುವನ್ನು ಕೊಟ್ಟು ಒಂದು ಕೊಂಬು ಸುರ ವನ್ನು ತೆಗೆದು ಕುಡಿದನಂತೆ.

**ಸಿಂಹ**—ಮನೆಗಳು ಹಾಳಾಗುತ್ತಿರುವುವಲ್ಲಾ ಸೋಣಾ! ಮನುಷ್ಯ ರಿಗೆ ಸುರವನ್ನು ಕುಡಿಸಿ ಗುಲಾಮರನ್ನಾಗಿ ಮಾಡಿ, ಅವರಿಂದ ಕೆಲಸ ಮಾಡಿಸಿಕೊಂಡು ಬಂದ ದವಸ ಧಾನ್ಯಗಳನ್ನು ಸೂರೆಮಾಡಿ, ಅವರ ದನ ಕರುಗಳನ್ನು ಉಪಾಯದಿಂದ ಸೆಳೆದು ರಾವಲ ರಕ್ತವನ್ನೇ ಹೀರುತ್ತಿರುವ ರಲ್ಲಾ ಈ ಆರ್ಯ ಪಿಶಾಚಿಗಳು!

**ಸೋಣ**—ಇನ್ನೊಂದು ಸಂಗತಿ-ಮೊನ್ನೆ ಇಂದ್ರಸೇನನ ಪರಿವಾರ ದೊಬ್ಬನು ದಾರಿಯಲ್ಲಿ ಬರುತ್ತಾ ಹೊಳೆಯಲ್ಲಿ ನೀರನ್ನು ಕುಡಿಯುತ್ತಿದ್ದ ನಂತೆ-ಅದೇ ಸಮಯದಲ್ಲಿ ರಾವಲನೊಬ್ಬನು ಎದುರು ದಡದಲ್ಲಿ ನೀರನ್ನು ಕುಡಿಯುತ್ತಿದ್ದನಂತೆ. ಆ ಆರ್ಯನು ಇವನನ್ನು ನೋಡಿ ಬಹು ಕೋಪ ದಿಂದ ಜುಟ್ಟನ್ನು ಹಿಡಿದು ಎಳೆಯುತ್ತಾ 'ಲೋ ಪಿಶಾಚಿಯೇ! ಎದುರು ದಡದಲ್ಲಿ ನಾನು ನೀರು ಕುಡಿಯುತ್ತಿದ್ದುದನ್ನು ಕಂಡೂ ನೀನು ಹೇಗೆ ಹೊಳೆಗೆ ಕೈಹಾಕಿದೆ? ಅನಾರ್ಯ ಮೃಗವೇ! ದಸ್ಯುವೇ! ನಿನಗೆ ಶಿಕ್ಷೆ ಯನ್ನು ಮಾಡುವೆನೆಂದು ಹೇಳಿ ದರದರನೆ ಎಳೆದುಕೊಂಡು ಹೋಗಿ, ಕಾದ ಬಂಡೆಯಮೇಲೆ ಮಲಗಿಸಿ, ಸೊಂಟದ ಬಟ್ಟೆಯನ್ನು ಕಿತ್ತುಹಾಕಿ ಕೈಯ ಲ್ಲಿದ್ದ ಮುಳ್ಳು ಕೋಲಿನಿಂದ ರಕ್ತಬರುವವರೆಗೂ ಬೆನ್ನಿಗೂ ತೊಡೆಗೂ ಹೊಡೆದು ಹೊಡೆದು ಹೊರಟುಹೋದನಂತೆ.

**ಸಿಂಹ**—ಆ ರಾವಲನು?

**ಸೋಣ**—ಸತ್ತಿರಬಹುದು.

**ಸಿಂಹ**—ಹಂ? ಸತ್ತನೇ? ಆ ದೊರೆಗೆ ಇದು ಗೊತ್ತಾಯಿತೇ?

**ಸೋಣ**—ಗೊತ್ತೂ ಆಯಿತು-ಸಂತೋಷಪಟ್ಟು ಆ ಪರಿವಾರದವ ನಿಗೆ ಬಹುಮಾನಗಳನ್ನೂ ಮಾಡಿದನು.

**ಸಿಂಹ**—ಎಂತೆಂತಹ ಅವಮಾನಗಳನ್ನು ಸಹಿಸಬೇಕಾಗಿ ಬಂದಿದೆ!

ಈ ಸೊಳ್ಳೆಗಳನ್ನು ಬಡಿದ ಹೊರತು ಶಾಂತಿಬಾರದು....ಸ್ವತಂತ್ರ ರಾವಲರೇ ! ನಿಮಗೆ ಈ ಗತಿಯೇ ! ನಿಮ್ಮ ಮನೆಯಲ್ಲಿ ನಿಮಗೆ ಕುಡಿಯುಲು ಗಾಳಿಯಿಲ್ಲವೇ ? ನಿಮ್ಮ ಮನೆಯಲ್ಲಿ ನೀವು ಬಂದಿಗಳೇ! ಧೀರ ಬಂಡನ ಸ್ಮರಣೆಯು ನಿಮ್ಮ ಮನಸ್ಸಿಗೆ ಬಾರದೆ ! ನಿಮ್ಮ ಮನೆಯಲ್ಲಿ ನೀವು ನಾಯಿ ನರಿಗಳಂತೆ ಬೇಟೆಯಾಡಲ್ಪಡುತ್ತಿರುವಿರಲ್ಲಾ ! ಸೋದರರೇ ! ವೀರ ರಾವಲರೇ ! ಏಕೆ ಮೌನವಾಗಿ ಕುಳಿತು ಹೆಣಗಳಂತೆ ಆಗುವ ಅವಮಾನವನ್ನೆಲ್ಲಾ ಸಹಿಸಿ ಮಣ್ಣಾಗುವಿರಿ ! ಪರರಾಜನ ಪದತಲದಿಂದ ಹೊರಳಲಾರಿರೋ !.... ಎಂತಹ ದುರ್ಗತಿ! ಎಂತಹ ದುರ್ಗತಿ ! ಸೋನಾ ! ನಮಗೆ ಪುನಃ ಸ್ವಾತಂತ್ರ್ಯ ಬಾರದೇ ! ಈ ಮಯೂರನನ್ನೂ ಅವನ ಪರಿವಾರವನ್ನೂ ಹೊಡೆದೋಡಿಸಿ ರಾವಲರ ಹಿಂದಿನ ಕೀರ್ತಿಯನ್ನು ಗಳಿಸಲಸಾಧ್ಯವೇ ?

**ಸೋನ**—ಅಸಾಧ್ಯವೆಂದರೇನು ಸಿಂಹ ? ಮೂವತ್ತು ಸಾವಿರ ರಾವಲರನ್ನು ಐದುನೂರು ಮಂದಿ ಆರ್ಯಮೃಗಗಳು ಆಳುತ್ತಿರುವುದು ಸತ್ಯವಾದರೂ ನಮಗೇ ನಂಬಿಕೆಯಾಗದು. !—ಅದು ಸಾಧ್ಯವೆಂದು ತೋರದು.

**ಸಿಂಹ**—ಅದು ಹೇಗೆ ಸಾಧ್ಯವಾಗಿದೆ ?

**ಸೋನ**—ನಿಮ್ಮ ತಂದೆಯಂತಹ ಹಿರಿಯರು ಆ ದೊರೆಯ ಗುಲಾಮರಾಗಿ ತಮ್ಮವರನ್ನೇ ತುಳಿಯುತ್ತಿರುವುದರಿಂದ !

**ಸಿಂಹ**—ಅವರಿಗೆ ಸ್ವಾತಂತ್ರ್ಯಾಭಿಲಾಷೆಯಿಲ್ಲವೇ ?

**ಸೋನ**—ಎಲ್ಲಿಂದ ಬರಬೇಕು ?

**ಸಿಂಹ**—ನಮ್ಮ ತಂದೆಗೆ ರಾವಲರು ಸ್ವತಂತ್ರರಾಗಲೆಂಬ ಹಾರೈಕೆ ಇಲ್ಲವೆ ?

**ಸೋನ**—ಸ್ವಾಭಿಮಾನವಾದರೂ ಅವರಲ್ಲಿದ್ದರೆ ಇಂತಹ ಗುಲಾಮಗಿರಿಯಲ್ಲಿ ಸೇರಿ ತಮ್ಮವರನ್ನೇ ಆ ದೊರೆಯ ಪುಂಡು ಕೋಪಕ್ಕೆ, ಅನ್ಯಾಯನ ಇಚ್ಛೆಗೆ ಆಹುತಿ ಕೊಡುತ್ತಿರಲಿಲ್ಲ.

(ಬಣ್ಣಮನು ಹಾಡುತ್ತಾ ಬರುವನು–ಸಿಂಹ ಸೋನರು ಹಿಂದಕ್ಕೆ ಸರಿದು ಕೇಳುತ್ತಾ ನಿಲ್ಲುವರು )

ಧೀರ ಬಂಡನೆ ನೀನು। ಹೋರಾಡಿ ಗಳಿಸಿದ್ದ । ಪೌರುಷದ ಕೆಚ್ಚೆಲ್ಲಿ

ಮಾಯವಾಯ್ತು ॥ ಆರ್ಯರನು ನಡುಗಿಸುವ । ಕಾರ್ಯದಲ್ಲಿ ಬದುಕಿದ್ದ । ಧೀರ ರಾವಲ ರಕ್ತವೇಕೆ ನೀರಾಯ್ತು ॥—

ಹೇ! ರಾವಲಮಾತೆ! ಪರರಾಜರ ಪದತಲದಲ್ಲಿ ಧೀರರಾದ ನಿನ್ನ ಮಕ್ಕಳು ಹುಳುಗಳಂತಳಿದು ಧೂಳಾಗುತ್ತಿರುವರಲ್ಲಾ! ನಿನ್ನ ಮನೆಯಲ್ಲಿ ನಿನ್ನ ಮಕ್ಕಳು ಹೆರರಿಗೆ ಬಂದಿಗಳು-ಗುಲಾಮರು! ಅಯ್ಯೋ! ದುರ್ಗತಿಯೇ! ಆರ್ಯದೊರೆಗಳನ್ನು ಗುಡ್ಡಗುಡ್ಡಗಳಲ್ಲಿ ಬೇಟೆಯಾಡಿಸಿ ರಾವಲರ ಸ್ವಾತಂತ್ರ್ಯವನ್ನು ಕಾಪಾಡಿದ ಧೀರ ಭಂಡನೇ! ನಿನ್ನ ಪೌರುಷವೆಲ್ಲಿ ಹೋಯಿತು? ನಿನ್ನ ಸ್ವಾಭಿಮಾನವು ಎಲ್ಲಡಗಿತು? ಒಬ್ಬ ರಾವಲನ ಮಾನವನ್ನೂ ಜೀವವನ್ನೂ ರಕ್ಷಿಸುವುದಕ್ಕಾಗಿ ನಿನ್ನಬಲಗೈಯನ್ನೇ ಆಹುತಿಕೊಟ್ಟ ನಿನ್ನ ಧುರೀಣತೆಯು, ವಾತ್ಸಲ್ಯವೂ ಎಲ್ಲಿಂಗಿಹೋಯಿತು? .. ಧೀರ ರಾವಲ ರಾಜ್ಯವು ಗೂಬೆಗಳ ಗೂಡಾಗಿರುವುದು....ಇನ್ನೆಷ್ಟು ದಿವಸಗಳು ಈ ಬಂಧನದಲ್ಲಿ ಮಹಾ ಅವಮಾನಗಳನ್ನು ಸಹಿಸಿಕೊಂಡು ಜೀವಧಾರಣೆ ಮಾಡಬೇಕೆಂದಿರುವಿರಿ ರಾವಲ ಸೋದರರೇ! ನಿಮ್ಮೆದೆಯಲ್ಲಿ ನಿಜವಾಗಿಯೂ ರಾವಲರ ರಕ್ತವು ಹರಿಯುತ್ತಿದ್ದರೆ, ನೀವು ಗಂಡಸರಾಗಿರುವುದು ನಿಜವಾದರೆ, ನೀವು ಸ್ವತಂತ್ರರಾಗಿ, ನಿಮ್ಮ ಮನೆಗೆ ನೀವು ಯಜಮಾನರಾಗಿ ಬಾಳುತ್ತಿದ್ದುದು ನಿಜವಾದರೆ, ಏಳಿ! ಎದ್ದೇಳಿ! ಸ್ವತಂತ್ರರಾಗಿರುವೆವೆಂದು ಕೂಗಿ? ಗುಡ್ಡ ಗುಡ್ಡಗಳೂ ಸ್ವಾತಂತ್ರ್ಯಘರ್ಜನೆ ಧ್ವನಿಮಾಡಲಿ! ಕದನದಲ್ಲಿ ಮಡಿದರೆ ನಿಮ್ಮ ಈ ಹೀನ ಗುಲಾಮ ಜೀವನವು, ಈ ಅಸಹ್ಯದ ಬಾಳು ಕೊನೆಯಾಗುವುದು-ಗೆದ್ದುಬದುಕಿದ್ದರೆ ಸ್ವತಂತ್ರ ರಾವಲರೆಂಬ ಕೀರ್ತಿ ಬರುವುದು -ಏಳಿ ಸೋದರರೇ! ಎದ್ದೇಳಿ,....ಹೀಗೆಂದು ಸಾರುತ್ತಾ ಗುಡ್ಡಗುಡ್ಡಕ್ಕೂ ಹೋಗಿ ರಾವಲರ ಎದೆಯಲ್ಲಿ ಪೌರುಷವನ್ನು ಬಿತ್ತುತ್ತೇನೆ-ಈ ದಿನವಲ್ಲದಿದ್ದರೆ ಇನ್ನೊಂದು ವರುಷಕ್ಕಾದರೂ ಫಲಿಸೀತು-ಜೈ ರಾವಲ ಮಾತೆ.

(ಹೊರಡಲಿರುವನು-ಸಿಂಹ, ಸೋನರು ಬಂದು ನಮಸ್ಕರಿಸುವರು.)

ಬಣ್ಣಮ!—ಮಕ್ಕಳೇ! ಇದೇನು ನೀವಿಲ್ಲಿರುವಿರಿ?

**ಸಿಂಹ**—ಸಾಧುವರ್ಯ! ನಮ್ಮ ರಾವಲ ರಾಜ್ಯವು ಇಂದು ಪರರಾಜನ ತುಳಿತಕ್ಕೆ ಸಿಕ್ಕಿ ಕೊರಗುತ್ತಿರುವುದನ್ನು ನೋಡಿ ನೋಡಿ ಸಾಕಾಗಿ, ನಮ್ಮ ರಾಜ್ಯದ ಸ್ವಾತಂತ್ರ್ಯ ಸಾಧನೆಗೆ ಪ್ರಾಣಕೊಡಲೂ ಸಿದ್ಧರಾಗಿ ಬಂದಿರು

ವೆವು. ನಿಮ್ಮ ಮಾತು ನಮ್ಮ ಮನಸ್ಸನ್ನು ಸ್ಥೈರ್ಯಗೊಳಿಸಿತು—ಮುಂದೆ ಯಾವ ದಾರಿಯಲ್ಲಿ ಕೆಲಸಮಾಡಬೇಕೋ ತಾವು ತಿಳಿಸಿದರೆ ಅದರಂತೆ ನಡೆಯಲು ಸಿದ್ಧರಾಗಿದೇವೆ.

**ಬಣ್ಣಮ**—ಮಕ್ಕಳೇ ಈ ಕಾರ್ಯದಲ್ಲಿ ನೀವು ಭಾಗಿಗಳಾಗಬೇಕಾದರೆ ಸ್ವಲ್ಪ ದೃಢ ಸಂಕಲ್ಪವಿರಬೇಕು.

**ಸಿಂಹ**—ನಮ್ಮ ಪ್ರಾಣಾರ್ಪಣ ಮಾಡಲಿಕ್ಕೂ ಸಿದ್ಧರಾಗಿದ್ದೇವೆ.

**ಸೋನ**—ಸಂತೋಷದಿಂದ ಪ್ರಾಣವನ್ನೊಪ್ಪಿಸುವೆವು.

**ಬಣ್ಣಮ**—ಒಳ್ಳೆಯದು ! ನೀವು ಇಬ್ಬರು ಮುಂದೆ ಬಂದಂತೆ ಬಹು ಜನರು ಮುಂದೆ ಬರಬೇಕು. ನಿವ್ಮಿಬ್ಬರ ಹೃದಯದ ಪಂಜು ರಾಜ್ಯಾಭಿಮಾನದ ಕಿಚ್ಚನ್ನು ಹಿಡಿದು ಬೆಳಗುತ್ತಿರುವಂತೆ ಎಲ್ಲರ ಹೃದಯಗಳೂ ಬೆಳಗಬೇಕು. ಆಮೇಲೆ ಮುಂದಿನ ಕಾರ್ಯ. ನೀವು ಪಂಜುಗಳಾಗಿ ಹೊರಟು, ಎದುರಾಗಿ ಎಂತಹ ಬಿರುಗಾಳಿ ಬಂದರೂ ಆರದೆ ಮನೆಮನೆಗೂ, ಗುಡ್ಡಗುಡ್ಡಕ್ಕೂ ಹೋಗಿ ಆರಿರುವ ಪಂಜುಗಳನ್ನು ಹೊತ್ತಿಸಿ ಉರಿಯುವಂತೆ ಮಾಡುತ್ತಾ ಬರಬೇಕು. ರಾವಲರ ಹಿಂದಿನ ವೈಭವವನ್ನು ಹಾಡಬೇಕು. ಮುಂದಿನ ವೈಭವದ ಹಾದಿಗೆ ಬೆಳಕನ್ನು ನೀಡಬೇಕು-ಮೊದಲು ನಮ್ಮ ಗುಲಾಮ ವಸ್ತ್ರವನ್ನು ಕಿತ್ತೊಗೆದು ಪರರ ಅನುಕರಣವೆಂಬ ಮುಳ್ಳು ಗಿಡದ ಬೇರನ್ನು ನಿಮ್ಮ ಹೃದಯದಿಂದ ಕಿತ್ತೊಗೆದು, ರಾವಲರ ನಾರುಬಟ್ಟೆಗಳನ್ನುಡಿ; ಆದರೆ ಅದು ನಿಮ್ಮ ಕಣ್ಣಿಗೆ ಒರಟಾಗಿ ಕಾಣಬಹುದು. ಈ ಬಟ್ಟೆಗಳಿಗಾಗಿ ಎಷ್ಟು ಬಂಡಿ ದವಸ ಧಾನ್ಯಗಳನ್ನು ಅವರಿಗೆ ಸೂರೆಗೊಟ್ಟು ನಿಮ್ಮ ಸೋದರರ ಅನ್ನವನ್ನು ಕಿತ್ತುಕೊಂಡು ಕೊಲ್ಲುತ್ತಿರುವಿರಿ ? ತೆಗೆಯಿರಿ ಈ ಗುಲಾಮ ವೇಷವನ್ನು. ರಾವಲನ್ನೊಬ್ಬನಿಗೆ ಮನೆಯಲ್ಲಿ ಮಾಡಿದ ನಾರಿನ ನಿಲುವಂಗಿಯೊಂದು ಸಾಕು-ನಡೆಯಿರಿ – ಹೊಳೆಯ ಬಳಿಯಲ್ಲಿ ಮುಂದಿನ ಕಾರ್ಯ ಕ್ರಮವನ್ನು ತಿಳಿಸುತ್ತೇನೆ.

**ಸಿಂಹ** :— ಜೈ ರಾವಲಮಾತೇ ! ಜೈ - ನಿನ್ನ ಬಿಡುಗಡೆ ಹತ್ತಿರವಿರುವುದು-

(ಹೊರಡುವರು)

## ದೃಶ್ಯ ೨

(ಗುಡ್ಡದ ಮೇಲಿನ ಮನೆಯೊಂದು—ಮಯೂರವರ್ಮ, ಇಂದ್ರ ಸೇನರು ಕುಳಿತಿರುವರು—ಜಬಲನು ಕೈಜೋಡಿಸಿ ನಿಂತಿರುವನು.

**ಮಯೂರ**—ಇಂದ್ರಸೇನ! ಎಡಮಾರಿನ ಕಡೆಯ ರಾವಲ ಪಿಶಾಚ ಗಳು ಹೊಳೆಯ ನೀರನ್ನು ಮುಟ್ಟಕೂಡದೆಂದು ಅಪ್ಪಣೆಮಾಡಿದರೂ ಮತ್ತೆ ಮತ್ತೆ ಬಂದು ಕದ್ದುಕೊಂಡು ಹೋಗುತ್ತಿರುವರಂತೆ.

(ಜಬಲನು ಹುಬ್ಬುಗಂಟಿಕ್ಕುವನು]

**ಇಂದ್ರ**—ಹೌದು ಮಹಾರಾಜ! ಅದಕ್ಕಾಗಿಯೇ ನದಿಯ ದಂಡೆಗಳಲ್ಲಿ ಉದ್ದಕ್ಕೂ ಮುಳ್ಳುಹಾಕಿಸಿ, ಒಂದು ಕಡೆಯಲ್ಲಿ ಮಾತ್ರ ಹಾದಿ ಬಿಟ್ಟು, ಅಲ್ಲಿ ಇಬ್ಬರನ್ನು ಕಾವಲಿಟ್ಟಿರುವೆ.

**ಮಯೂರ**—ಅವರು ಯಾರನ್ನಾದರೂ ಬಿಡಬಹುದೋ?

**ಇಂದ್ರ**—ಇಲ್ಲ! ಅನಾರ್ಯರ ಯಾವ ಪಿಳ್ಳೆ ಅಲ್ಲಿಗೆ ಬಂದರೂ ಸರಿಯಾಗಿ ಶಿಕ್ಷಿಸುವಂತೆ ಕಟ್ಟಾಜ್ಞೆ ಮಾಡಿರುವೆನು.

**ಮಯೂರ**—ಆ ನಾರು ಬಟ್ಟೆಯ ಗಲಾಟೆಯೇನು?

**ಇಂದ್ರ**—ಯಾವನೋ ಹುಚ್ಚನು ನಮ್ಮಿಂದ ಬಟ್ಟೆಗಳನ್ನು ರಾವಲ ನಾದವನು ಕೊಳ್ಳಬಾರದೆಂದೂ, ನಮ್ಮಂತೆ ಮೈತುಂಬ ಬಟ್ಟೆ ಹಾಕಕೂಡ ದೆಂದೂ, ಹಿಂದಿನಂತೆ ಪ್ರತಿಯೊಬ್ಬನೂ ನಾರಿನ ಒಂದೊಂದು ಗಂಟೆಯನ್ನು ಧರಿಸಬೇಕೆಂದೂ ಚಳುವಳಿ ನಡೆಸುತ್ತಿರುವನು—ನನಗೆ ಆ ಹುಚ್ಚನು ಸಿಕ್ಕಿಲ್ಲ. ಸಿಕ್ಕಿದರೆ ಅವನ ಅವತಾರವನ್ನು ಪೂರ್ತಿಸಿಬಿಡುವೆನು.

**ಮಯೂರ**—ಗಂಟೆಗಳನ್ನು ತಯಾರುಮಾಡುವವರ ಕೈಗಳನ್ನು ಕತ್ತರಿಸುವೆವೆಂದು ಹೇಳಿ ಬಹಳ ವರ್ಷಗಳ ಕೆಳಗೆ ಅಪ್ಪಣೆಮಾಡಿದ್ದೆವಲ್ಲಾ.

**ಇಂದ್ರ**—ಹೌದು ಮಹಾರಾಜ! ಅದರಂತೆ ಹಿಂದೆ ಬಲಮಾರಿನಲ್ಲಿ ಇಪ್ಪತ್ತೇಳು। ಜನರ ಕೈಗಳನ್ನೂ, ಹದಿನೈದು ಹುಡುಗರ ಬೆರಳುಗಳನ್ನೂ ಕತ್ತರಿಸಿ ಹಾಕಿದೆವಲ್ಲಾ.

**ಮಯೂರ**—ಪುನಃ ಇದೇನು ಗದ್ದಲ!....ರಾವಲ ಮೃಗಗಳು ಹಿಂದಿನ ಶಿಕ್ಷೆಗಳನ್ನು ಮರೆತಿರಬೇಕು.

**ಇಂದ್ರ**— ಈಗ ಬಹುಮಂದಿ ಗಂಟೆಗಳನ್ನೇ ತೊಡುತ್ತಿರುವರು ಮಹಾರಾಜ. ಅವೆಲ್ಲಿ ಸೃಷ್ಟಿಯಾಗುತ್ತಿವೆಯೋ ತಿಳಿಯದು. ನಮ್ಮ ಬಟ್ಟೆ ಬರೆಗಳನ್ನು ಕಿತ್ತೊಗೆಯುತ್ತಿರುವರು.

**ಮಯೂರ**— ನಾಯಿಗೆ ಕಿರೀಟವಿಟ್ಟರೆ ನಿಲ್ಲುವುದೇನು ?

[ಜಬಲನು ದೂರ ಸರಿಯುವನು]

**ಇಂದ್ರ**— ಸುರಾಪಾನವನ್ನು ನಿಷೇಧಿಸಿ ಗಲಿಬಿಲಿಮಾಡುತ್ತಾ ಬಹುಮಂದಿ ಕೊಳ್ಳುವುದನ್ನೇ ಬಿಟ್ಟಿರುವರು

**ಮಯೂರ**— (ಮುಖವನ್ನು ಗಂಟಿಕ್ಕಿ) ಜಬಲಾ ! ಇದು ನಿಜವೋ ? ಇತ್ತೀಚೆಗೆ ನಿನ್ನ ಮಾರಾಟವು ಎಷ್ಟು ಕಡಿಮೆಯಾಗಿದೆ ?

**ಜಬಲ**— (ಮುಂದಕ್ಕೆ ಬಂದು) ಬಹು ಮಂದಿ ಮನೆಮಾರುಗಳನ್ನು ಒತ್ತೆಯಿಟ್ಟು ಕುಡಿಯುತ್ತಿದ್ದು ಕೊನೆಗೆ ನಿರ್ಗತಿಕರಾಗಿ ಸುರಪಾನವನ್ನು ಬಿಟ್ಟಿರುವರು. ಪ್ರಭೊ ! ಈಗ ಹದಿನೈದು ದಿವಸಗಳಿಂದ ಇದರ ಮಾರಾಟವು ಬಹಳ ಕಡಿಮೆಯಾಗಿದೆ-ದಿವಸಕ್ಕೆ ಎಡಮಾರೊಂದರಲ್ಲೇ ಒಂದು ಸಾವಿರ ಕೊಂಬಿಗೆ ಕಡಿಮೆ ಇಲ್ಲದಂತೆ ಮಾರಾಟವಾಗಿ ಒಂದು ಬಂಡಿಗೆ ಕಡಿಮೆ ಇಲ್ಲದಂತೆ ಧಾನ್ಯವೂ, ಒಂದು ಕಟ್ಟಿಗೆ ಕಡಿಮೆ ಇಲ್ಲದಂತೆ ಹುಲಿದೊಗಲೂ ಬರುತ್ತಿತ್ತು. ಈಚೆಗೆ ಕೊಳ್ಳುವರೇ ಇಲ್ಲ ಮಹಾರಾಜ !

**ಮಯೂರ**— ನೀನು ಸುರಪಾನದ ಶ್ರೇಷ್ಠತೆಯನ್ನು ಗುಡ್ಡ ಗುಡ್ಡದಲ್ಲೂ ಸಾರಿಸಿ ಅದನ್ನು ಸೇವಿಸಿದವರು ಆರ್ಯರಿಗೇ ಅಲ್ಲ, ದೇವತೆಗಳಿಗೆ ಸಮಾನರಾಗುವರೆಂದು ಹೇಳುತ್ತಾ ಬರಬೇಕು. ತಿಳಿಯಿತೋ ?

**ಜಬಲ**— ತಿಳಿಯಿತು ಮಹಾರಾಜ.

**ಇಂದ್ರ**— ಎಡಮಾರಿನಲ್ಲೂ, ಬಲಮಾರಿನಲ್ಲೂ ರಾತ್ರಿಯಲ್ಲೆಲ್ಲಾ ಸಭೆಸೇರಿ ಜನರಿಗೆ ದುರ್ಬೋಧೆಮಾಡುತ್ತಿರುವರಂತೆ ಮಹಾರಾಜ. ಈ ಗಲಭೆಗಳಿಗೆಲ್ಲಾ ಅವರೇ ಕಾರಣ !

**ಮಯೂರ**— ಆ ರಾಜದ್ರೋಹಿಗಳ ಉದ್ದೇಶವೇನು ?

**ಇಂದ್ರ**— ರಾವಲ ರಾಜ್ಯವನ್ನು ಪರನಾಡಿನವರಿಗೊಪ್ಪಿಸಿ ಗುಲಾಮರಾಗಿರುವುದು ಸರಿಯಲ್ಲವೆಂದೂ, ತಮ್ಮ ಸ್ವಾತಂತ್ರ್ಯವನ್ನು ತಾವು ಪಡೆಯು

ವುದರಲ್ಲಿ ಪ್ರಾಣವನ್ನೊಪ್ಪಿಸಲೂ ಸಿದ್ಧರಾಗಿರುವುದು ಪ್ರತಿಯೊಬ್ಬರ ಕರ್ತವ್ಯವೆಂದೂ ಬೋಧಿಸಿ ಜನರನ್ನು ಎತ್ತಿ ಕಟ್ಟುತ್ತಿರುವರು.

**ಮಯೂರ**—ಈ ಕಾಡು ನಾಯಿಗಳಿಗೆ ಸ್ವಾತಂತ್ರ್ಯ—ಸ್ವಾತಂತ್ರ್ಯ!

[ಜಬಲನು ಕೋಪದಿಂದ ಹಿಂದಕ್ಕೆ ಸರಿದು ಕಣ್ಮರೆಯಾಗುವನು]

ನಾವು ಬಂದು ಇಲ್ಲಿ ಆಳದಿದ್ದರೆ ಈ ಹಂದಿಗಳು ತಮ್ಮ ತಮ್ಮಲ್ಲೇ ಒಬ್ಬರನ್ನೊಬ್ಬರು ಕಚ್ಚಿ, ಹೊಡೆದಾಡಿ ಮಡಿಯುತ್ತಿದ್ದಗು-ಈಗ ನೋಡು. ರಾಜ್ಯವು ಎಷ್ಟು ಶಾಂತವಾಗಿದೆ.

**ಇಂದ್ರ**—ಸ್ವಾತಂತ್ರ್ಯವು ಪ್ರತಿಯೊಂದು ಜೀವಿಗೂ ಜನ್ಮಸಿದ್ಧವಾದ ಹಕ್ಕೆಂದು ಕೂಗಾಡುವರು.

**ಮಯೂರ**—ಹಕ್ಕೇ! ಈ ಹಂದಿಗಳಿಗೆ ಸ್ವಾತಂತ್ರ್ಯ........ಇಷ್ಟು ಕೊಬ್ಬಿರುವರೇ?....ಇಂದ್ರಸೇನ, ನೀನು ಹೇಳಿದಂತೆ ಯಾರೋ ಕೆಲವು ರಾಜದ್ರೋಹಿಗಳು ಹಿಂದೆನಿಂತು ಈ ಮಂಗಗಳನ್ನು ಕುಣಿಸುತ್ತಿರುವರು. ಅವರನ್ನು ಹಿಡಿದು ತಲೆಯೊಡಿಸು—ಎಲ್ಲವೂ ಶಾಂತವಾಗುವುನು . ಇದು ಯಾರ ಕೆಲಸವಿರಬಹುದು?

**ಇಂದ್ರ**—ಯಾರದೆಂದು ಸ್ಪಷ್ಟವಿಲ್ಲ ಮಹಾರಾಜ-ಆದರೆ (ಕಿವಿಯಲ್ಲಿ) ಜಬಲನ ಮಗ ಸಿಂಹನು ಮುಖ್ಯ ಪಾತ್ರವನ್ನು ವಹಿಸಿರುವನಂತೆ....

**ಮಯೂರ**—ಯಾರು ಸಿಂಹನೇ?

**ಇಂದ್ರ**—ಅಹುದು ಮಹಾರಾಜ.

**ಮಯೂರ**—ನಿಜವಾಗಿಯೂ..?

**ಇಂದ್ರ**—ಸತ್ಯವಾಗಿಯೂ ಮಹಾರಾಜ! (ಮೆತ್ತಗೆ)....ಜಬಲನ ಆಪ್ತನಾದ ಗಂಡಿಯೇ ಈ ರೀತಿ ಹೇಳಿದನು.

**ಮಯೂರ**—(ಕಿಡಿಯಾಗಿ) ಜಬಲಾ! ಜಬಲಾ!! (ಸುತ್ತಲೂ ನೋಡಿ ಗಟ್ಟಿಯಾಗಿ) ಜಬಲಾ!!!

**ಜಬಲ**—(ಪ್ರವೇಶಿಸಿ) ಮಹಾರಾಜ!

**ಮಯೂರ**—ನಿನ್ನ ಮಗನ ಹಾವಳಿಯನ್ನು ನೋಡಿದೆಯೋ?

ಹಿಂದೊಂದುವೇಳೆ ಅವನು ನಮ್ಮ ಪರಿವಾರದವನನ್ನು ಬೈದಾಗ ತಲೆಕೆಳಗಾಗಿ ಮರಕ್ಕೆ ಕಟ್ಟಿ ಹೊಡೆದುದನ್ನು ಅವನು ಮರೆತುಬಿಟ್ಟನೇನೋ ?.... ಜನರನ್ನು ನಮ್ಮ ಮೇಲೆ ಎತ್ತಿಕಟ್ಟಲು ತರದೂದು ನಡೆಯಿಸುತ್ತಿರುವ ದ್ರೋಹಿಗಳ ಪೈಕಿ ಇವನೊಬ್ಬನಂತೆ. ನಿನಗಿರುವ ಒಬ್ಬ ಮಗನನ್ನು ಕಳೆದುಕೊಳ್ಳಲು ಇಷ್ಟವಿಲ್ಲದ ಪಕ್ಷಕ್ಕೆ, ಅವನಿಗೆ ಸರಿಯಾಗಿ ಬುದ್ಧಿ ಹೇಳಿ ನಿನ್ನಂತೆ ರಾಜಭಕ್ತಿಯಿಂದ ಬಾಳುವಂತೆ ಎಚ್ಚರಿಕೆ ಕೊಡು.

[ಜಬಲನು ಸುಮ್ಮನಿರುವನು]

**ಮಯೂರ**— ಹಾಂ ! (ಘರ್ಜಿಸುವನು)

[ಜಬಲನು ಸುಮ್ಮನಿರುವನು]

**ಮಯೂರ**—ಏನು ! ಜಬಲಾ ! ಏಕೆ ಸುಮ್ಮನಿರುವೆ ?. ನೀನು ಆ ದ್ರೋಹಿಗಳ ಗುಂಪಿಗೆ ಸೇರಿ ಸಾಯುವಿಯೇನು ?

[ಜಬಲನು ಸುಮ್ಮನೆ ಕತ್ತನ್ನು ತಗ್ಗಿಸಿ ನಿಂತಿರುವನು]

**ಇಂದ್ರ**—ಜಬಲನು ನಮಗೆ ಬಲಗೈ ಹಾಗಿರುವಾಗ ಅಂಥವನ ವಿಷಯದಲ್ಲಿ ಅನುಮಾನವೇ ಮಹಾರಾಜ.

**ಮಯೂರ**—ಅನುಮಾನವೇ ? ... ಖಂಡಿತವಾಗಿಯೂ ಇಲ್ಲ. ಜಬಲಾ ! ಜಬಲಾ ! ಇತ್ತಬಾ (ಜಬಲನು ಮುಂದೆ ಬರುವನು—ಎದ್ದು ಅವನ ಬಳಿಗೆ ಹೋಗಿ ಬೆನ್ನನ್ನು ತಟ್ಟಿ) ನಿನ್ನ ಮಗನಿಗೆ ಬುದ್ಧಿ ಹೇಳಿ ಅವನು ಆ ದ್ರೋಹಿಗಳ ಗುಂಪಿಗೆ ಸೇರಿದ್ದರೆ ಅದು ಬಹಳ ಕೇಡೆಂದು— ತಿಳಿಸಿ ಅವನಿಗೆ ಒಳ್ಳೆ ಹಾದಿಯನ್ನು ತೋರಿಸು—ನಿನ್ನಂತೆ ಅವನೂ ನಮಗೆ ವಿಧೇಯನಾಗಿದ್ದರೆ, ನಮ್ಮ ಪರಿವಾರದಲ್ಲೇ ಒಂದು ಪದವಿ ಸಿಕ್ಕೀತು. ತಿಳಿಯಿತೋ ?

**ಜಬಲ**—ತಿಳಿಯಿತು ಮಹಾರಾಜ.

**ಮಯೂರ**—ಇಂದ್ರಸೇನ ! ನೀನು ಹಲವರನ್ನು ರಾತ್ರೆಗೆ ಎಡಮಾರಿಗೂ ಬಲಮಾರಿಗೂ ಕಳುಹಿಸಿ ಗಲಭೆ ಮಾಡುವ ಆ ಹಂದಿಗಳನ್ನು ಹಿಡಿಸಿ ರಾಜ್ಯದಿಂದ ಹೊಡೆದು ಓಡಿಸು. ಆನೆ ಮಡುವಿಗೆ ತಳ್ಳಿಸು. ತಕ್ಕ ಶಿಕ್ಷೆಯನ್ನು ಕೊಡು.

**ಇಂದ್ರ**—ಅಪ್ಪಣೆ ಮಹಾರಾಜ.

**ಮಯೂರ**—ಜಬಲಾ ! ಈ ದಿನ ರಾತ್ರಿಯೇ ಗುಡ್ಡಗಳಿಗೆಲ್ಲಾ ಡಂಗೂರಯುವರನ್ನು ಕಳುಹಿಸಿ, ರಾಜರಿಗೆ ದ್ರೋಹಚಿಂತನೆಯ ಮಾತ ನಾಡಿದವರನ್ನು ಜೀವಸಹಿತ ಸುಡಿಸುವೆವೆಂದೂ, ಅಂಥವರನ್ನು ಹಿಡಿದು ಕೊಟ್ಟವರಿಗೆ ಅರ್ಧ ಬಂಡಿ ಧಾನ್ಯವನ್ನು ಬಹುಮಾನ ಕೊಡುತ್ತೇವೆಂದು ಸಾರಿಸು , ತಿಳಿಯಿತೋ ?

**ಜಬಲ**—ಅಪ್ಪಣೆ ಮಹಾರಾಜ.

**ಮಯೂರ**—ಹೊರಡು ನೀನು-ಆದರೆ ಆ ಸಂಗತಿಯನ್ನು ಉದಾ ಶೀನ ಮಾಡಬೇಡ. ..ನಿನ್ನ ಮಗನ ಮೇಲೆ ನಿನಗೆ ಆಸೆಯಿದ್ದರೆ, ಅವನಿಗೆ ನೀನೇ ಸರಿಯಾಗಿ ಬುದ್ಧಿಗಲಿಸು. ನಮ್ಮವರೆಗೂ ಅವನ ವಿಷಯವು ಬಾರ ದಿರಲಿ. ಸ್ಥಿತಿಯು ಕಠಿಣವಾದೀತು—ಇನ್ನು ನೀನು ಹೊರಟು ಸಾರಿಸು.

(ಜಬಲನು ಹೊರಡುವನು....ಮಯೂರ . ಇಂದ್ರಸೇನರು ಒಳಕ್ಕೆ ಹೊರಡುವರು)

## ದೃಶ್ಯ ೩

(ಗುಡಿಸಿಲಲ್ಲಿ ಜಬಲ, ಸಿಂಹರಿರುವರು)

**ಜಬಲ**—ಮಗನೇ ! ಸಿಂಹ ! ನಿನಗೇಕೆ ಈ ಹುಚ್ಚು ಹಿಡಿಯಿತು ! ಸರಳವಾದ ನಿನ್ನ ಬುದ್ಧಿಗೆ ಯಾವ ಪಿಶಾಚಿಯು ಗಾಳಿ ಬೀಸಿತು? ಎಲ್ಲ ಹುಡುಗರಂತೆ ವಿಧೇಯನಾಗಿರದೆ, ಮನಸ್ಸು ಬಂದಂತೆ ವರ್ತಿಸುತ್ತಿರುವೆ ಯಲ್ಲಾ ! ಸಿಂಹ? ನಿನ್ನನ್ನು ಈ ದುರ್ವರ್ತನೆಗಳಿಗೆಳೆದ ಪಾಪಿಗಳ್ಯಾರು ?

**ಸಿಂಹ**—ಹಾಂ ! ತಡಿಯಿರೀ ! ಅಪ್ಪಾಜೀ ! ನಿಮ್ಮ ನಾಲಿಗೆ ಬಂದಂತೆ ಕಾಣದ ವಸ್ತುಗಳ ಪೂಜ್ಯ ಪವಿತ್ರತೆಯನ್ನು ಹಳಿದು ಪಾಪ ಮಾಡಬೇಡಿ.

**ಜಬಲ**—(ಕುಪಿತನಾಗಿ) ನನಗೇ ಬುದ್ಧಿಹೇಳುತ್ತಿರುವ ನಿನಗೆ ಪೂಜ್ಯ ಪವಿತ್ರ ಜ್ಞಾನವಿರುವುದೇನೋ ?

**ಸಿಂಹ**—ಸತ್ಯವಾಗಿಯೂ ಇರುವುದು.

**ಜಬಲ**—ಇದ್ದರೆ ನೀನು ತಂದೆಯೆಂಬ ಪೂಜ್ಯವಸ್ತುವನ್ನು ಧಿಕ್ಕರಿಸ ತ್ತಿರಲಿಲ್ಲ.

**ಸಿಂಹ**—ನಿಮ್ಮನ್ನು ಧಿಕ್ಕರಿಸುತ್ತಿಲ್ಲ-ಖಂಡಿತವಾಗಿಯೂ ಇಲ್ಲ.

**ಜಬಲ**—ಹಾಗಾದರೆ ನನ್ನ ಮಾತನ್ನು ಮೀರುವುದಿಲ್ಲ ತಾನೇ ?

**ಸಿಂಹ**—ನಿಮ್ಮ ಮಾತು ಅಧರ್ಮಮಯವಾಗಿದ್ದರೆ ಮೀರಬೇಕಾಗ ವುದು.

**ಜಬಲ**—ಧರ್ಮಾಧರ್ಮಗಳ ವಿವೇಚನೆಯು ನನ್ನಂತಹ ಹಿರಿಯ ರದು. ನಮ್ಮ ಮಾತೇ ನಿನಗೆ ಧರ್ಮವಾಕ್ಯ.

**ಸಿಂಹ**—ಹಾಗೆಂದಿಗೂ ಆಗಲಾರದು. ಅಪ್ಪಾಜಿ ಕೇಳಿ! ನೀವ ಪ್ರತಿದಿನವೂ ಸುರಾಪಾನ ಮಾಡುತ್ತಿರುವಿರಿ. ಅದು, ನಮ್ಮ ಸಂಗಡಕ್ಕೆ ಶುದ್ಧರಾವಲರಿಗೆ, ನಿಷಿದ್ಧವಾದದ್ದು. ಅದನ್ನು ಕುಡಿಯುವುದು ಅಧರ್ಮ ಆ ಅಧರ್ಮವನ್ನೇ ಆಚರಿಸೆಂದು ನೀವು ನನಗೆ ಹೇಳುವುದು ನಿಮ ಧರ್ಮವೋ ? ...ಹಾಗೆ ನಾನು ಮಾಡುವುದು ನನಗೆ ಧರ್ಮವೊ ?

**ಜಬಲ**—ಸುರಾಪಾನ ಮಾಡುವುದರಿಂದ ದೇವತೆಗಳು ಸುಪ್ರೀ ರಾಗುವರು ?

**ಸಿಂಹ**—ಇದು ಯಾರು ಹೇಳಿದುದು ?

**ಜಬಲ**—ನಮ್ಮ ಮಹಾರಾಜರು.

**ಸಿಂಹ**—ಅದರಲ್ಲಿ ನಿಮಗೆ ನಂಬಿಕೆಯಿರುವುದೋ ?

**ಜಬಲ**—ಇಲ್ಲ.

**ಸಿಂಹ**—ಹಾಗಾದರೆ ನೀವೇಕೆ ಸುರಾಪಾನ ಮಾಡುವಿರಿ ?

**ಜಬಲ**—ರಾಜಾಜ್ಞೆಯನ್ನು ಪಾಲಿಸುವುದು ನಮ್ಮ ಧರ್ಮ.

**ಸಿಂಹ**—ರಾಜಾಜ್ಞೆಯನ್ನು ಪಾಲಿಸುವುದೇ ನಿಮಗೆ ಧರ್ಮವಾಗಿದ್ದ ನಿಮ್ಮ ಶುದ್ಧಾತ್ಮನ ಹೇಳಿಕೆಯನ್ನು ನೀವು ತುಳಿದಿರುವವರೆವಿಗೂ, ನಿಮ ಮಾತಿಗೆ ಕಿವಿಗೊಡದಿರುವುದೇ ನನ್ನ ಧರ್ಮವಾಗಿದೆ. ಅಧರ್ಮಿಗ ಹೇಳಿಕೆಯನ್ನು ಕೇಳುವುದು ದೊಡ್ಡ ಧರ್ಮದ್ರೋಹ.

**ಜಬಲ**—ಹಾಗಾದರೆ ನಿನ್ನ ಗಣನೆಯಲ್ಲಿ ನಾನು ಅಧರ್ಮಿಯೋ ?

**ಸಿಂಹ**—ಅಲ್ಲದೆ ಮತ್ತೇನು ? ತಮ್ಮ ಆತ್ಮನನ್ನು ಹೆರರಿಗೆ ಮಾರಿ ಅವರ ಹೇಳಿಕೆಯಂತೆ ನಡೆಯವುದು ಅಧರ್ಮವಲ್ಲದೆ ಮತ್ತೇನು ?

**ಜಬಲ**—ಹಾಗಾದರೆ ಧರ್ಮವೆಂದರೇನು ?

**ಸಿಂಹ**—ತನ್ನ ಶುದ್ಧಾತ್ಮನ ಹೇಳಿಕೆಗೆ ಕಿವಿದೆರೆದು, ಪ್ರಾಣಹೋದರೂ ಸರಿ, ಅದರಂತೆ ನಡೆಯುವುದೇ ಧರ್ಮ.

**ಜಬಲ**—ಸಿಂಹ ! ನಿನಗೆ ಈ ಉಪದೇಶಗಳನ್ನು ಊದಿದವರ್‍ಯಾರು ? ತಿಳಿದುಕೋ—ತಂದೆತಾಯಿಗಳ ಮಾತೇ ಗುರುತರವಾದದ್ದು. ಪರರ ಹೇಳಿಕೆಯನ್ನು ಕೇಳುವುದು ಅಧರ್ಮ.

**ಸಿಂಹ** ಹಾಗಾದರೆ ತಾತ ಮುತ್ತಾತಂದಿರ ಮಾತು ?

**ಜಬಲ**—ಮತ್ತೂ ಗುರುತರವಾದದ್ದು.

**ಸಿಂಹ**—ಹಾಗಾದರೆ ಧೀರಬಂಡನ ಮೊಮ್ಮಗನಾದ ನೀವು, ಅವನ ಮಾತನ್ನು ಪಾಲಿಸದೇ ಹೋದರ ಅದು ಅಧರ್ಮವಲ್ಲವೇ ?

**ಜಬಲ**—ಇರಬಹುದು !

**ಸಿಂಹ**—'ಪ್ರಾಣಹೋದರೂ ಸರಿ, ರಾಜ್ಯವನ್ನು ಮತ್ತೊಬ್ಬರಿಗೊಪ್ಪಿಸಿ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಡಿ ? ' ಎಂದು ಸಾರಿರುವ ಅವನ ವೀರವಾಣಿಗಳನ್ನನುಸರಿಸಿ ನಡೆಯುವುದು ನನಗೆ ಧರ್ಮವಲ್ಲವೆ ?

**ಜಬಲ**—ಅಹುದು ಸಿಂಹ ! ಆದರೆ ಅವು ಬಹು ಹಳೆಯ ಮಾತುಗಳು. ಈಗ ರಾಜ್ಯವು ಆರ್ಯರ ಕೈಸೇರಿ, ಅವರು ಆಳುತ್ತಿರುವುದರಿಂದ ಅವರಿಗೆ ವಿಧೇಯರಾಗಿ ನಡೆಯುವುದು ನಮ್ಮ ಧರ್ಮ.

**ಸಿಂಹ**—ನಮ್ಮ ಸ್ವಾತಂತ್ರ್ಯವನ್ನಪಹರಿಸಿರುವ ಆ ಪಾಪಿಗಳನ್ನು ಹೊಡೆದೋಡಿಸುವುದೇ ನಮ್ಮ ಧರ್ಮ.

**ಜಬಲ**—ರಾಜದ್ರೋಹದ ಮಾತಾಡಿದವರನ್ನು ಮಡುವಿಗೆ ತಳ್ಳುವಂತೆ ಮಹಾರಾಜರು ಅಪ್ಪಣೆ ಕೊಟ್ಟಿರುವರು.

**ಸಿಂಹ**—ಕೊಡಲಿ.

**ಜಬಲ**—ನೀನು ವಿಧೇಯನಾಗಿ ನಡೆದುಕೊಳ್ಳದಿದ್ದರೆ ನಿನಗೂ ಅದೇ ಶಿಕ್ಷೆಯಾದೀತು.

**ಸಿಂಹ**—ಆಗಲೀ! ಈ ಗುಲಾಮ ರಾವಲನಾಗಿ ಬದುಕಿರುವುದಕ್ಕಿಂತ ಪ್ರಾಣಬಿಡುವುದೇ ಮೇಲು.

**ಜಬಲ**—ಸಿಂಹ! ಬೇಡವೋ! ಹಟಮಾಡಬೇಡ! ರಾಜರು ಬಹಳ ಕೋಪಗೊಂಡಿದ್ದಾರೆ.

**ಸಿಂಹ**—ಆ ಹಂದಿಯ ಕೋಪವನ್ನೂ ಕೊಬ್ಬನ್ನೂ ಇಳಿಸುತ್ತೇನೆ.

**ಜಬಲ**—ರಾಜದ್ರೋಹವು ಮಹಾ ಪಾತಕವಾದದ್ದು.

**ಸಿಂಹ**—ಶುದ್ಧಾತ್ಮನ ಆಜ್ಞೆಯಂತೆ ನಡೆಯುವವನಿಗೆ ಪಾಪ ಪುಣ್ಯದ ಭೀತಿಯಿಲ್ಲ.

**ಜಬಲ**—ಸಿಂಹ! ಮಗನೇ! ನನ್ನ ಮುದ್ದು ಸಿಂಹ!—(ಹತ್ತಿರ ಬಂದು ಮೈದಡುವುವನು) ನನ್ನ ಕಣ್ಣುಗಳಲ್ಲಿ ನೀರನ್ನು ನೋಡುವುದು ನಿನಗೆ ಧರ್ಮವಲ್ಲ. ನನ್ನನ್ನು ಸಂಕಟಪಡಿಸಬಾರದು—ಸಿಂಹ! ಈ ದುರ್ಬುದ್ಧಿಯನ್ನು ಬಿಟ್ಟು ಎಲ್ಲರಂತಿರು ರಾಜರು ಅವರ ಪರಿವಾರದಲ್ಲಿ ಒಂದು ದೊಡ್ಡ ನೌಕರಿಯನ್ನು ಕೊಡಿಸುವರಂತೆ ಸಿಂಹ! ನಿನ್ನ ವಯಸ್ಸು ಬಹು ಕೆಟ್ಟದ್ದು. ತಲೆ ಗಟ್ಟಿಯಾಗಿರುವುದೆಂದು ಬಂಡೆಯನ್ನು ಹಾಯುವಂತೆ ಮಾಡುವುದು. ಸ್ವಲ್ಪ ಶಾಂತನಾಗು. ಸಿಂಹ! ಹಿರಿಯರ ಮಾತನ್ನು ತಳ್ಳಬೇಡ

**ಸಿಂಹ**—ಅಪ್ಪಾಜೀ! ನಿಮಗೆ ಈ ಮಂಕು ಏಕೆ ಮುಚ್ಚಿಕೊಂಡಿತು! ಈಗ ನಿಮ್ಮ ಬುದ್ಧಿಗೆ ಧರ್ಮಾಧರ್ಮಗಳ, ಮಾನಾವಮಾನಗಳ ವಿವೇಚನೆಯೇ ಇಲ್ಲದಂತಾಗಿದೆಯಲ್ಲಾ! ನಿಜವಾಗಿಯೂ ನಿಮ್ಮ ಮನಸ್ಸು ಮಂದವಾಗಿಬಿಟ್ಟಿರುವುದು. ರಾವಲರ ಗೌರವವನ್ನು ಕಾಪಾಡುವುದಕ್ಕೆ ತನ್ನ ಜೀವವನ್ನೇ ಬಲಿಯಾಗಿ ಕೊಟ್ಟ ಆ ಧೀರಬಂಡನ ವಂಶೋತ್ಪನ್ನರಾದ ನೀವು ಆ ರಾಜನ ಸೇವೆಯಲ್ಲಿ ಮಗ್ನರಾಗಿ ಮಂಕುಹಿಡಿದು ಮಾಡಬಾರದ ಕೆಲಸಗಳನ್ನು ಮಾಡುತ್ತಿರುವಿರಲ್ಲಾ! ಅಪ್ಪಾಜೀ! ಎಚ್ಚರಹೊಂದಿ! ನಿಮ್ಮ ಸೋದರರಾದ ಸಾವಲರನ್ನು ಪರರಾಜನ ಪರಿವಾರದವರು ಚಿತ್ರಹಿಂಸೆಪಡಿಸುತ್ತಿರುವುದನ್ನು ಕಂಡೂ ಕಂಡೂ, ಈ ಪೈಶಾಚಿಕ

ಕೃತ್ಯವನ್ನು ನಿಲ್ಲಿಸಲಿಕ್ಕೊ ಕೈಯೆತ್ತದೆ, ಮತ್ತೂ ಹೆಚ್ಚಾದ ಭಕ್ತಿಯಿಂದ ಅವರ ಪಾಪಕಾರ್ಯಕ್ಕೆ ಸಹಾಯಮಾಡುತ್ತಿರುವ ನಿಮ್ಮ ಬುದ್ಧಿಗೆ ಅದೆಂತಹ ಮಂಕು ಮುಚ್ಚಿದೆಯೋ ಕಾಣೆನಲ್ಲಾ! ಅಪ್ಪಾಜೀ! ಏಳಿ! ನೀವೊಬ್ಬರು ಧೈರ್ಯಮಾಡಿದರೆ ನಮ್ಮ ರಾಜ್ಯದ ಸ್ವಾತಂತ್ರ್ಯವು ಕರಗತವಾದಂತೆಯೇ ಸರಿ.

**ಜಬಲ**—ಸಿಂಹ! ನನಗೇ ಬುದ್ಧಿಗಲಿಸುತ್ತಿರುವ ನಿನ್ನ ತಾರುಣ್ಯದ ಕೆಚ್ಚೆಷ್ಟೋ?

**ಸಿಂಹ**—ನಿಮ್ಮ ಕೈಯನ್ನು ನಿಮ್ಮ ಕೈಯಿಂದಲೇ ಕಡಿಸುತ್ತಿರುವ ಆ ನಿಮ್ಮ ಬುದ್ಧಿಯ ಅಂಧಕಾರದಷ್ಟು!.. ಅಪ್ಪಾಜೀ! ನಿಮಗೆ ನಿಜವಾಗಿಯೂ ಯಾರೋ ಮಂತ್ರಿಸಿರಬೇಕು! ರಾವಲರ ಗುಡ್ಡ ಗುಡ್ಡವೂ ಸ್ವಾತಂತ್ರ್ಯ ಸಂಪಾದನೆಗಾಗಿ ಪ್ರಾಣಕೊಡಲು ಸಿದ್ಧವಾಗಿ ಮುಂದೆ ಬರುತ್ತಿರುವಾಗ ವೀರ ಬಂಡನ ವಂಶದವರಾದ ನೀವು ಗುಲಾಮಗಿರಿಗೆ ಶರಣುಹೋಗಿರುವುದು ಬಹು ವಿಚಿತ್ರವಾಗಿರುವುದು. ಇದು ನಿಜವಾಗಿಯೂ ಹುಚ್ಚುತನ

**ಜಬಲ**—ನನ್ನದು ಹುಚ್ಚುತನವೋ? ಇರಬಹುದು! ಇರಬಹುದು! ....ಸಿಂಹನು ನನ್ನ ಮಗನಲ್ಲದಿರುವುದು ಸತ್ಯವಾದರೆ, ತಂದೆಯ ಮಾತನ್ನು ಮೀರುವುದು ಧರ್ಮವೆಂಬುದು ಸತ್ಯವಾದರೆ, ನನಗೆ ಹುಚ್ಚುಹಿಡಿದಿರುವುದೂ ನಿಜವೇ!!

(ಗಂಡಿಯು ಪ್ರವೇಶಿಸುವನು)

**ಜಬಲ**—ಗಂಡೀ! ಬಾ!! ಒಳಕ್ಕೆ ಬಾ!

**ಗಂಡಿ**—ಇದೇನು ಜಗಳವಾಡುತ್ತಿರುವಿರಿ?

**ಜಬಲ**—ಜಗಳವಲ್ಲ!—ಬಾ! ನೀನಾದರೂ ಹೇಳು! ರಾವಲರ ಸ್ವಾತಂತ್ರ್ಯ ಸಂಪಾದನೆಯು ಸಾಧ್ಯವೇ? ನಮ್ಮ ಬಾಣಬತ್ತಳಿಕೆಗಳನ್ನೂ, ಕವಣೆ ಕಲ್ಲುಗಳನ್ನೂ, ನಮ್ಮಿಂದ ಕಿತ್ತುಕೊಂಡು, ತಮ್ಮ ಆಡಳಿತವನ್ನು ಸ್ಥಾಪಿಸಿ ಹತ್ತಾರು ವರ್ಷಗಳಿಂದ ಸ್ಥಿರವಾಗಿ ಆಳುತ್ತಿರುವ ರಾಜರನ್ನೆದುರಿಸಿ ಬದುಕುವುದು ಸಾಧ್ಯವೇ?

**ಗಂಡಿ**—ಛೇ! ಎಲ್ಲಿಯಾದರೂ ಉಂಟೇ? ಅವರನ್ನು ಎದುರಿಸು

ತ್ತಿದಾದರೂ ಧರ್ಮವೇ ? ಅವರಿಂದ ನಮಗೆಷ್ಟು ಉಪಕಾರವಾಗಿದೆ ! ಆಗುವುದೆ ! ಆಗಬೇಕು ! ಪ್ರತಿಯೊಂದು ಗುಡ್ಡದ ಬುಡದಲ್ಲಿಯೂ ಬಾವಿ ತೋಡಿಸಿ ಕೊಟ್ಟಿರುವರು. ಅದಕ್ಕೆ ಪ್ರತಿಯಾಗಿ ನಾವು ವರ್ಷಕ್ಕೆ ಸ್ವಲ್ಪ ಸ್ವಲ್ಪ ದವಸವನ್ನು ಮಾತ್ರ ಕೊಡುತ್ತಿದೇವೆ. ಎಡಮೂರಿನಿಂದ ಬಲಮೂರಿನವರೆವಿಗೂ ದಾರಿ ಮಾಡಿಸಿರುವರು. ಅವರ ಬಲದ ರಕ್ಷಣೆಯಲ್ಲಿ ನಾವು ಸುಖವಾಗಿರುವೆವು.

**ಜಬಲ**—ಅಂತಹ ರಾಜರನ್ನೋಡಿಸಿ ಸ್ವತಂತ್ರ್ಯರಾಗುವುದು ಸಾಧ್ಯವೇ ?

**ಗಂಡಿ**—ಆ ದ್ರೋಹದ ಮಾತನ್ನಾಡಿದವರಿಗೆ ಮರಣವೇ ಶಿಕ್ಷೆ.

**ಜಬಲ**—ನಾವು ಹಿಂದೆ ಸ್ವತಂತ್ರ್ಯರಾಗಿದ್ದುದು ನಿಜ. ಈಗ ಇವರು ನಮಗೆ ಅವಮಾನ ಮಾಡುತ್ತಿರುವುದೂ ನಿಜವೇ ! ಆದರೆ ಅವರನ್ನೀಗ ಎದುರಿಸುವುದು ಹೇಗೆ ? ಎದುರಿಸಿದ ಮೇಲೆ ಗೆದ್ದು ಬದುಕುವುದು ಹೇಗೆ ? ಅಥವಾ ಗೆದ್ದು ಬದುಕಿದರೂ, ನಮ್ಮ ರಾಜ್ಯವನ್ನು ಈಗಿರುವಂತೆ ಆಳಿಕೊಳ್ಳಲು ಶಕ್ತಿಯಿರುವುದೆ ?

**ಸಿಂಹ**—ಖಂಡಿತವಾಗಿ ನಿಮಗಿಲ್ಲ. ಗುಲಾಮರಾಗಿರಲು ಶಕ್ತಿಯಿರುವುದು, ಪೌರುಷವೂ ಇರುವುದು. ತಮ್ಮ ಸೋದರರನ್ನು ಎರಡನೇಯವನ ಪೈಶಾಚಿಕವೃತ್ತಿಗೆ ಆಹುತಿಕೊಡಲವೆ ಶಕ್ತಿಯಿರುವುದು.

**ಗಂಡಿ**—ಸಿಂಹ ! ಏನು ನುಡಿಯುತ್ತಿರುವೇ ! ರಾಜದ್ರೋಹದ ಮಾತು ! ಯಾರಾದರೂ ಹೋಗಿ ಈ ನಿನ್ನ ದುರ್ವರ್ತನೆಯನ್ನು ಮಹಾರಾಜರಿಗೆ ತಿಳಿಸಿದರೆ ಮರಣದಂಡನೆಯನ್ನು ಕೊಟ್ಟಾರು !

**ಸಿಂಹ**—(ಮುಂದೆ ಬಂದು) ಮುಚ್ಚು ಬಾಯಿ ! ಅಧಮಾ ! ನೀನೇ ಅಲ್ಲವೇ ಅಲ್ಲಿಯ ಸುರಾಪಾನಕ್ಕೆ, ಗುಲಾಮನಾಗಿ, ಇಲ್ಲಿನ ಸಂಗತಿಗಳನ್ನು ತಿಳಿದು ಹೋಗಿ ಹೇಳುವ ದ್ರೋಹಿ ! ಕಾಲವೊದಗಿದಾಗ ನಿನ್ನ ಗತಿಯೇನಾಗುವುದೋ ನೋಡು !

**ಗಂಡಿ**—(ಬೆದರಿ) ಜಬಲ ! ನಿನ್ನ ಮಗನ ದುರ್ವರ್ತನೆಯು ನಿಜವಾಗಿಯೂ ಶಿಕ್ಷಿಸಲ್ಪಡುವುದು.

**ಸಿಂಹ**—ಹೇಡೀ! ನಿನ್ನಂತಹ ದ್ರೋಹಿಗಳು, ನರಿಗಳು ರಾವಲ ಲ್ಲಿ ಹುಟ್ಟಬಾರದಾಗಿತ್ತು. ಹೊರಡು ಇಲ್ಲಿಂದ!

**ಜಬಲ**—ಸಿಂಹ! ತಡೇ! ಈ ನನ್ನ ಮನೆಗೆ ನಾನು ಯಜಮಾನ. ಂಡಿಯು ನನ್ನ ಸ್ನೇಹಿತ.

**ಸಿಂಹ**—ಹಾಗಾದರೆ ನಾನೇ ಹೊರಡುತ್ತೇನೆ. ಇಂತಹ ಹೇಡಿಗಳ ಮುಖಾವಲೋಕನವೇ ಪಾಪಕರವಾದ್ದು. (ಹೊರಟುಹೋಗುವನು)

**ಜಬಲ**—(ಎದ್ದು ಹೋಗುತ್ತಾ) ಸಿಂಹ! ತಡೀ! ತಡೀ!....ಸಿಂಹಾ!

## ದೃಶ್ಯ ೪

(ಬಯಲು; ರಾತ್ರಿವೇಳೆ; ಜನರು ಪಂಜುಗಳನ್ನು ಹಿಡಿದು ಸಿಂಹನ ಸುತ್ತಲೂ ನಿಂತಿರುವರು. ಪಕ್ಕದಲ್ಲಿ ಸೋನನಿರುವನು).

**ಸಿಂಹ**—ವೀರ ರಾವಲ ಸೋದರರೇ! ಕಾಡಿನಲ್ಲಿರುವ ಮೃಗಗಳೂ ಸ್ವೇಚ್ಛಾವಿಹಾರಿಗಳಾಗಿ ನಿರ್ಭಯದಿಂದ ಸ್ವಾತಂತ್ರ್ಯ ಸುಖಾನುಭವ ಮಾಡು ತ್ತಿರುವುವು. ಅವುಗಳನ್ನು ಬಂಧಿಸಹೋದರೆ ಧೈರ್ಯದಿಂದ ಎದುರಿಸಿ ಪ್ರಾಣ ವನ್ನಾದರೂ ಬಿಡುವುವಲ್ಲದೆ ಪರರ ಕೈಲಿ ಬಂದಿಯಾಗಲೊಪ್ಪವು. ಅರಣ್ಯದ ಪಕ್ಷಿಗಳು ಕೂಡ ಸ್ವತಂತ್ರವಾಗಿ ಹಾರಾಡಿಕೊಂಡು ಸುಖವಾಗಿರುವುವು. ಅವುಗಳನ್ನು ಮೋಸದಿಂದ ಬಂಧಿಸಿದರೆ, ಸಮಯಬಂದರೆ ತಪ್ಪಿಸಿಕೊಂಡು ಹೋಗುವವು. ಅದು ಸಾಧ್ಯವಾಗದಿದ್ದರೆ ಪಂಜರಗಳಲ್ಲೇ ಪ್ರಾಣತ್ಯಾಗ ಮಾಡುವುವು. ಎಂದಮೇಲೆ ಸ್ವಾತಂತ್ರ್ಯವು ಲೋಕದ ಪ್ರತಿಯೊಂದು ಪ್ರಾಣಿಗೂ ಎಷ್ಟು ಸ್ವಾಭಾವಿಕವಾದ ಹಕ್ಕಾಗಿದೆಯೆಂಬುದು ಸ್ಪಷ್ಟಪಡುವು ದಿಲ್ಲವೇ? ಹೀಗಿರುವಲ್ಲಿ ಮನುಷ್ಯರಾದ ನಾವು, ಅದರಲ್ಲೂ ಧೀರರಾವಲರು ಮೂವತ್ತುಸಾವಿರ ಮಂದಿಯನ್ನು ಐದು ನೂರು ಪರಕೀಯರು ಸವಾರಿ ಮಾಡುತ್ತಾ ನಾಯಿ ನರಿಗಳಿಗಿಂತಲೂ ಕಡೆಯಾಗಿ ಕಾಣುತ್ತಾ, ನಮ್ಮ ಮನೆ ಯಲ್ಲಿ ನಮ್ಮನ್ನೇ ಗುಲಾಮರನ್ನಾಗಿ ಮಾಡಿಕೊಂಡು ತಮ್ಮ ದರ್ಪವನ್ನು ನಡೆಯಿಸುತ್ತಿರುವುದು ಬಹು ಆಶ್ಚರ್ಯಕರವಾದ ಅವಮಾನವಾಗಿದೆ. ಐದು ನೂರು ಕಾಡು ಕುದುರೆಗಳನ್ನು—ಬುದ್ಧಿಯಿಲ್ಲದ ಮೂಕ ಪ್ರಾಣಿಗಳನ್ನು ಹಿಡಿದು ಸವಾರಿ ಮಾಡುವುದು ದುಸ್ತರವಾಗಿರುವಾಗ; ಒಂದಲ್ಲ, ಎರಡಲ್ಲ,

ಮೂವತ್ತುಸಾವಿರ ಜನ ವೀರರಾವಲರನ್ನು ಐದುನೂರುಮಂದಿ ಸವಾರಿ ಮಾಡುತ್ತಾ ಪಶುಗಳಂತೆ ಒದೆಯುತ್ತಿರುವರೆಂದ ಮೇಲೆ, ರಾವಲರು ಕುದುರೆಗಳೋ, ಕತ್ತೆಗಳೋ ಅಥವ ಹೆಣಗಳೋ? ಧೀರರಾದ ಸೋದರರೇ, ನಿಮ್ಮ ಹಿಂದಿನ ವೈಭವದ ದಿವಸಗಳನ್ನು ಜ್ಞಾಪಿಸಿಕೊಳ್ಳಿ. ರಾವಲನೆಂದರೆ ಎಷ್ಟು ಹೆಮ್ಮೆಯಿಂದ, ನಮ್ಮ ನಾಡಲ್ಲೇ ಅಲ್ಲದೇ ನಮ್ಮಿಂದ ಆಚಿನ ಆರ್ಯನಾಡಿನಲ್ಲಿ ಕೂಡ ಸಂಚರಿಸುತ್ತಿದ್ದಿರಿ. ಇಲ್ಲಿನ ಬಡವನನ್ನು ಕೂಡ ಅಲ್ಲಿನ ಧನಿಕನು ಗೌರವಿಸುತ್ತಿರಲಿಲ್ಲವೇ? ಇಂದಿನ ಗತಿಯನ್ನು ನೋಡಿ! ನಮ್ಮ ನಾಡಿನಲ್ಲಿ ಧೈರ್ಯವಾಗಿ ಸಂಚರಿಸಲು ನಮಗೇ ಹಕ್ಕಿಲ್ಲದಂತಾಗಿದೆ. ನಿಮ್ಮ ತಾತ ಮುತ್ತಾತಂದಿರು ನೆಟ್ಟ ಮರಗಳ ಹಣ್ಣನ್ನು ನೀವು ಕಿತ್ತರೆ, ನಿಮ್ಮ ಕೈಗಳನ್ನು ಕತ್ತರಿಸುವರು. ನಿಮ್ಮ ನದಿಯ ನೀರನ್ನು ಕುಡಿದರೇ—ಅಲ್ಲ ಮುಟ್ಟಿದರೇನೇ—ನಿಮ್ಮನ್ನು ಬಂಡೆಯ ಮೇಲೆ ಬಡಿಸಿ ಸಾಯಿಸುವರು. ಈ ರೀತಿಯಾದ ಅಧರ್ಮಕ್ಕೆ ತಗ್ಗಿ, ಹೇಡಿಗಳಾಗಿ ಜೀವಚ್ಛವಗಳಂತೆ ಅನ್ಯಾಯಕ್ಕೆ ಆಹುತಿಯಾಗಿ ಪ್ರಾಣಬಿಡಲು ಒಪ್ಪುತ್ತೀರೋ? ಅಥವಾ ವೀರಬಂಡನ ಹೆಸರಿನಲ್ಲಿ, ಧೀರ ರಾವಲಮಾತೆಯ ಹೆಸರಿನಲ್ಲಿ ಜಯಕಾರ ಮಾಡುತ್ತಿದ್ದು ಸ್ವಾತಂತ್ರ್ಯ ಸಂಪಾದನೆಗಾಗಿ ಹೋರಾಡಲು ಮನಸ್ಸು ಮಾಡುವಿರೋ? ..ಸ್ವಾತಂತ್ರ್ಯವು ಪ್ರತಿಯೊಬ್ಬನ ಜನ್ಮಸಿದ್ಧವಾದ ಹಕ್ಕಿದ್ದು ಅದನ್ನು ಕಳೆದುಕೊಂಡು ಬಾಳುವುದೇ? ಏಳಿ! ರಾವಲ ಸೋದರರೇ! ಧೈರ್ಯವನ್ನು ತಾಳಿ!—ಈ ಗುಲಾಮಗಿರಿಯ ವೇಷವನ್ನು ತೆಗೆದು ನಮ್ಮ ನಾರಿನ ಗಂಟೆಗಳನ್ನು ಸಮಸ್ತರೂ ಧರಿಸಿರಿ. ಈ ಆರ್ಯರ ವೇಷವನ್ನು ಮನೆಯವರಿಗೆಲ್ಲಾ ತೊಡಿಸುವುದಕ್ಕಾಗಿ ಎಡಮಾರಿನ ರಾವಲನೊಬ್ಬನು ತನ್ನ ಧಾನ್ಯವನ್ನೆಲ್ಲಾ ಆಳರಸರಿಗೆ ಒಪ್ಪಿಸುತ್ತಾ ಬಂದು ಕೊನೆಗೆ ಸಾಲಗಾರನಾಗಿ ಗುಡ್ಡವನ್ನು ಬಿಟ್ಟು ಓಡಿಹೋದದ್ದನ್ನು ಮರೆತಿರೋ? ನಿಮ್ಮ ಈ ಅರ್ಧ ಗುಲಾಮಗಿರಿಯು ಅವರ ಬಟ್ಟೆಗಳನ್ನು ಕೊಂಡು ಅವರ ವೇಷವನ್ನನುಕರಿಸುವುದರಿಂದಲೇ. ಈಗಲೇ ಅವನ್ನು ಕಿತ್ತೊಗೆದು ಮನೆಯಲ್ಲಿ ತಾಯಿತಂಗಿಯರು ಮಾಡಿದ ಗಂಟೆಯನ್ನೇ ಧರಿಸಿರಿ. ಎರಡನೆಯದಾಗಿ ಆಳರಸರಿಂದ ನೀವು ಕಲಿಯುತ್ತಿರುವ ಪಾನ. ಆ ಸುರಾ, ಸೋಮಗಳನ್ನು ಕುಡಿದವರು ಅವರ ದೇವತೆಗಳಿಗೆ ಸಮಾನರಾಗುವರೆಂದು ಅವರು ಎಷ್ಟು ಕೂಗಿದರೂ, ಅದನ್ನು ಕುಡಿದವರು ಕತ್ತೆಗಳಿಗಿಂತಲೂ ಕಡೆಯಾಗಿ, ಕೊನೆಗೆ ತಿರಿದು

ತಿನ್ನಬೇಕಾಗುತ್ತದೆ ಎಂಬುದಕ್ಕೆ ಬಲವಾರಿನ ಗಂಡಿಯೇ ಸಾಕ್ಷಿ. ಆದುದರಿಂದ ನೀವೆಲ್ಲರೂ ಪಾನವನ್ನು ದ್ವೇಷಿಸುವುದಲ್ಲದೆ, ಇನ್ನು ಕುಡಿಯುತ್ತಿರುವವರಿಗೆ ಬುದ್ಧಿ ಹೇಳಿ, ಮಿೂರಿ ಬಂದು ಕೆಲವರು ಕೇಳದೇ ಹೋದರೆ ಅಂಥವರನ್ನು ಗುಡ್ಡದಿಂದ ಹೊರಕ್ಕೋಡಿಸಬೇಕು- ಹೀಗೆ ಮಾಡುವುದರಿಂದ ಕೆಲವು ದಿವಸಗಳಲ್ಲಿಯೇ ಈ ಆರ್ಯ ಜಂತುಗಳ ಸುರಾ, ಸೋಮಗಳನ್ನೂ, ಬಟ್ಟೆಬರೆಗಳನ್ನೂ ಕೇಳುವವರಿಲ್ಲದಂತಾಗಿ, ರಾವಲರ ದವಸ ಧಾನ್ಯವು ಅವರ ಮನೆಯಲ್ಲೇ ಇದ್ದು ಬಡತನವು ದೂರವಾಗುವುದಲ್ಲದೆ ಕೊನೆಗೆ ಆಳರಸರಿಗೆ ಹೊಟ್ಟೆಗಿಲ್ಲದಂತಾಗಿ ತೊಲಗುವರು. ನೀವು ಶುದ್ಧ ರಾವಲರೆಂಬುದನ್ನೂ ಎಂದೆಂದಿಗೂ ಸ್ವತಂತ್ರರೆಂಬುದನ್ನೂ, ಒಂದು ಕ್ಷಣವೂ ಮರೆಯದೆ ಒಗ್ಗಟ್ಟಿನಲ್ಲಿ ಕೆಲಸಮಾಡಿ ರಾವಲಮಾತೆಯ ಗೌರವವನ್ನು ಕಾಪಾಡಬೇಕು.

ಸೋದರರೇ !

ಮೃಗಗಳು ಕೂಡ ಸಹಿಸದ ಅವಮಾನದುರಿಯಲ್ಲಿ ಬೇಯುವುದಕ್ಕಿಂತ, ಸ್ವತಂತ್ರರೆಂಬುದನ್ನರಿತು, ಜನ್ಮಸಿದ್ಧವಾದ ಆ ಹಕ್ಕಿಗೆ ಕಾದು, ಪ್ರಾಣವನ್ನಾದರೂ ಒಪ್ಪಿಸೋಣ!—ಏಳಿರಿ! ಧೀರ ರಾವಲರೇ! ನೀವು ಸದಾ ಸ್ವತಂತ್ರರು! ದಾಸ್ಯಭಾವವನ್ನು ಕಿತ್ತೊಗೆದು ಪ್ರಾಣಕೊಡುವುದಕ್ಕೂ ಸಿದ್ಧರಾಗಿ, ನಾಡಿನ ಗೌರವವನ್ನು ಕಾಪಾಡಿರಿ! ಏಳಿ! ಹೇಡಿತನವನ್ನು ತಳ್ಳಿ!—ರಾವಲರು ಇನ್ನೂ ಬದುಕಿರುವರೆಂಬುದನ್ನು ತೋರಿಸಿ!...ಕೂಗಿರಿ, ಧೀರ ಬಂಡನಿಗೆ ಜೈ ಜೈ!

[ಎಲ್ಲರೂ ಜೈ-ಜೈ-ಜೈ]

**ಸೋನ**—ಅದೇನು ಗದ್ದಲ—ಸಿಂಹ! ಬಹುಮಂದಿ ಓಡಿ ಬರುವಂತಿದೆ?

(ಎಲ್ಲರೂ ಬಲಗಡೆಯೇ ನೋಡುತ್ತಿರುವರು ಇಂದ್ರಸೇನನು ತನ್ನ ಪರಿವಾರ ಸಮೇತನಾಗಿ ಕತ್ತಿಯನ್ನು ಹಿಡಿದು ಬರುವನು).

**ಸಿಂಹ**—ಸೋದರರೇ! ನೀವೆಲ್ಲರೂ ನನ್ನ ಹಿಂದೆ ಬಂದು ನಿಲ್ಲಿರಿ. ಯಾರೂ ಈಗ ಇಂದ್ರಸೇನನ ಮೇಲಾಗಲೀ, ಅಥವ ಅವನ ಪರಿವಾರದವರ ಮೇಲಾಗಲಿ ಕೈಮಾಡಕೂಡದು.

[ಎಲ್ಲರೂ ಹಿಂದಕ್ಕೆ ಸರಿಯುವರು]

**ಇಂದ್ರ**—ಏನು ಕೈ ಮಾಡುವುದು ? ನಿಮ್ಮ ಕೊಬ್ಬನ್ನು ಇಲ್ಲಿಯೇ ತೆಗೆದು ಯಜ್ಞಮಾಡುವೆನು ತಿಳಿಯಿತೋ ?

**ಸಿಂಹ**—ಇಂದ್ರಸೇನ ! ನೀನು ಬೊಗಳಿದ್ದಾಗಿದ್ದರೆ, ನೀನು ಬಂದಿರುವುದೇಕೆ ತಿಳಿಸು.

**ಇಂದ್ರ**—ಏನು ? ಬೊಗಳುವುದೇ ?.... ಸಿಂಹ ! ಹೇಡಿಯಾದ ನಿಮ್ಮಪ್ಪನನ್ನು ಹೆದರಿಸುವಂತೆ ನನ್ನನ್ನು ಹೆದರಿಸುವೆಯೋ ?

**ಸಿಂಹ**—ಹೇಡಿಯಾದ ನಮ್ಮಪ್ಪನನ್ನು ಹೆದರಿಸಿದರೆ ಪ್ರಯೋಜನವಿಲ್ಲವೆಂದೇ, ಶೂರನಾದ ನಿನ್ನನ್ನು ಹೆದರಿಸಿ ನೋಡುತ್ತಿರುವೆ.

**ಇಂದ್ರ**—ಅಷ್ಟು ಸಭ್ಯನಾದ ಜಬಲನ ಹೊಟ್ಟೆಯುಲ್ಲಿ ನಿನ್ನಂತಹ ಪುಂಡನು ಹುಟ್ಟಬಾರದಾಗಿತ್ತು.

**ಸಿಂಹ**—ಅಂತಹ ಸಭ್ಯನನ್ನು ನಿನ್ನಂತಹ ಪುಂಡನು ಆಳುತ್ತಿರಬಾರದಾಗಿತ್ತು.

**ಇಂದ್ರ**—ನಾನು ಪುಂಡನೋ ?

**ಸಿಂಹ**—ನೀನು ಪುಂಡನೊಂದೇ ಅಲ್ಲ-ಭಂಡನೂ ಹೌದು-ನಮ್ಮ ನದಿಯ ನೀರನ್ನು ಕುಡಿದರೆ, ನಮ್ಮನ್ನೇ ಮುಳ್ಳುಕೋಲಿನಿಂದ ಹೊಡೆಯುಲಿರುವ ನೀನು ಪುಂಡನೋ, ಭಂಡನೋ ನೀನೇಹೇಳು ?

**ಇಂದ್ರ**—ಚಂಡಾಲರಾದ ನಿಮಗೆ ನದಿಯ ನೀರೇ ?

**ಸಿಂಹ**—ನಿಮ್ಮನ್ನು ಆರ್ಯರೆಂದ ಕುರುಡನ್ಯಾರು ? ಸಾಧ್ಯವಿದ್ದಲ್ಲಿ ಈ ಗಾಳಿಯನ್ನೂ ಪೆಟ್ಟಿಗೆಯಲ್ಲಿಟ್ಟು ನೀವು ಕುಡಿದುಬಿಟ್ಟ ಗಾಳಿಯನ್ನೇ ನಮಗೆ ಕೊಡುತ್ತಿದ್ದಿರೇನೋ ?—ನರಾಧಮರೇ ! ನೀವು ಆರ್ಯರು ! ನೀವು ಉತ್ತಮರು ! ಜ್ಞಾನಿಗಳು ! ! ಪೂಜ್ಯರು ! ದೈವಭಕ್ತರು !!—ನಿಮ್ಮ ದೇವರುಗಳು ಪರರ ಸೊತ್ತನ್ನು ಕದಿಯಿರೆಂದು ಹೇಳುವುವೋ ?

**ಇಂದ್ರ**—ಹಲ್ಲುಹಿಡಿದು ಮಾತನಾಡು ! ಸಿಂಹ ! ಜಬಲನ ಹೆಸರಿನ ಮೇಲೆ ನಿನ್ನ ಬೊಗಳಿಕೆಗೆ ದವಕಾಶ ಕೊಟ್ಟಿರುವೆವು—ನಿನ್ನ ಕಾಲವು ಸಮಿಾಪಿಸಿದೆ.

**ಸಿಂಹ**—ಅದಿರಲಿ-ನೀನು ನಿಜವಾದ ಆರ್ಯನಾಗಿದ್ದರೆ, ಧರ್ಮಜ್ಞ ನಾಗಿದ್ದರೆ, ಈ ಪ್ರಶ್ನೆಗಳಿಗೆ ಉತ್ತರ ಕೊಡು—ಪರರ ಸೊತ್ತನ್ನು ಕದಿಯಿರೆಂದು ನಿಮ್ಮ ದೇವರುಗಳು ಹೇಳುವುವೊ ?

**ಇಂದ್ರ**—ಇಲ್ಲ.

**ಸಿಂಹ**—ಹಾಗಾದರೆ ನಮ್ಮ ಸೊತ್ತನ್ನು, ನಮ್ಮ ಸ್ವಾತಂತ್ರವನ್ನು, ಮಾನವನ್ನು ಕದ್ದ—ಅಲ್ಲ ಹಗಲಿನಲ್ಲಿ ಎಲ್ಲರ ಮುಂದೂ ದರೋಡೆಮಾಡುತ್ತಿರುವ ನಿಮಗೆ—ಹಗಲುಗಳ್ಳರಿಗೆ ನಿಮ್ಮ ದೇವರು ಕಠಿಣ ಶಿಕ್ಷೆಯನ್ನು ವಿಧಿಸುವುದಿಲ್ಲವೊ ?

**ಇಂದ್ರ**—ವಿಧಿಸಲಿ ! ಬಾಯಿಮುಚ್ಚು !

**ಸಿಂಹ**—ಇಂದ್ರಸೇನ ! ನನ್ನ ಕಾಲವು ಸಮೀಪಿಸಿರುವುದೆಂದು ಹೇಳಿದೆ. ನಿನ್ನ ಕಾಲವೂ ಬಹು ಹತ್ತಿರಿರುವುದೆಂಬುದನ್ನು ತಿಳಿ. ರಾವಲ ನಾಡಿನ ಬಂಡೆಗಳು ಕೂಡ ಸ್ವಾತಂತ್ರ್ಯಘೋಷಣೆಮಾಡುತ್ತಿವೆ. ಇಲ್ಲಿನ ಮರಗಿಡಗಳು ಕೂಡ ಸ್ವಾತಂತ್ರ್ಯ ಬರುವುವೆಂದು ನಲಿಯುತ್ತಿವೆ. ಹಕ್ಕಿಗಳು ಕೂಡ ಹೇಡಿತನದ ಗುಲಾಮತನವು ಸುಟ್ಟು ಬೂದಿಯಾಯಿತೆಂದು ಚಿಲಿಪಿಲಿಗುಟ್ಟುತ್ತಿವೆ. ಇಂದ್ರಸೇನ !-ನೀವು, ಆರ್ಯ ಪಶುಗಳು .......

**ಇಂದ್ರ**—ಆಂ ! ಏನೆಂದೇ ? ದ್ರೋಹೀ ! !

**ಸಿಂಹ**—ನಿಧಾನಿಸು ! ಕೇಳೂ-ಆರ್ಯ ಪಶುಗಳಾದ ನೀವು ಇದುವರೆಗೂ ಮಾಡಿದ ಪಾಪಕೃತ್ಯಗಳಿಗೆ, ಪೈಶಾಚಿಕ ವೃತ್ತಿಗಳಿಗೆ, ದರೋಡೆಗೆ ತಕ್ಕ ಶಿಕ್ಷೆಯನ್ನನುಭವಿಸುವಿರಿ. ಸ್ವತಂತ್ರ,ರಾವಲನಾಡು ನಿದ್ದೆಯಿಂದೆದ್ದು ಘರ್ಜಿಸುತ್ತಿದೆ. ಇನ್ನು ನಿಮ್ಮ ಹಾದಿಯನ್ನು ನೀವು ಹಿಡಿಯಿರಿ. ರಾವಲರ ನಾಡಿನಾಡಿಯಲ್ಲಿಯೂ ಜೀವಕಳೆ ತುಂಬುತ್ತಿದೆ. ನಮ್ಮ ಮನೆಗೆ ತಿರುಪಕ್ಕೆ ಬಂದು, ನಮ್ಮ ಮೇಲೇ ಸವಾರಿಮಾಡುತ್ತಿರುವ ನಿಮಗೆ—ಚಂಡಾಲರಿಗೆ ಇನ್ನು ಇಲ್ಲಿ ಎಡೆಯಿಲ್ಲ.

**ಇಂದ್ರ**—ದ್ರೋಹೀ ! ಬಾಯಿಮುಚ್ಚು ! ಸಾಕು ನಿನ್ನ ಪ್ರತಾಪ ! ರಾಜದ್ರೋಹಿ ! ! ಹುಡುಗನೆಂದು ನಿನ್ನನ್ನು ಇಷ್ಟು ದಿವಸಗಳು ಬಿಟ್ಟಿದ್ದೇ ತಪ್ಪಾಯಿತು. ನಿನ್ನ ಹುಚ್ಚುತನವನ್ನು ಕೇಳುವರಿಲ್ಲ-ಕಟ್ಟಿರೀ ಈ ದ್ರೋಹಿಯನ್ನು.

**ಸಿಂಹ**— ಇಂದ್ರಸೇನ! ಲೋ. ಹಗಲುಗಳ್ಳರ ಶಿಖಾಮಣಿಯೇ! ಹಿಟ್ಟಿಗಾಗಿ ಇಲ್ಲಿಗೆ ಬಂದು ಕೊನೆಗೆ ನಮ್ಮ ಮೇಲೆ ಸವಾರಿಮಾಡುತ್ತಾ ನಮ್ಮ ರಕ್ತವನ್ನೇ ಹಿಂಡಿ ಹೀರುತ್ತಿರುವ ನೀವು ದ್ರೋಹಿಗಳೋ ಅಥವಾ ನಮ್ಮ ನಾಡು, ನಮ್ಮದೆಂಬ ಸತ್ಯವಾದ ಘರ್ಜನೆಯನ್ನು ಮಾಡುತ್ತಿರುವ ನಾವು ದ್ರೋಹಿಗಳೋ ?—ಆ ನಿಮ್ಮ ದೇವರುಗಳೇ ಹೇಳಲಿ.

**ಇಂದ್ರ**—[ತನ್ನ ಪರಿವಾರದವರಿಗೆ] ಬಂಧಿಸಿರಿ ಅವನನ್ನು! ಏಕೆ ನೋಡುತ್ತಿರುವಿರಿ ?

(ಇಂದ್ರಸೇನನ ಪರಿವಾರದವರೂ ಮುಂದೆ ಬರುವರು—ರಾವಲರೂ ಮುಂದೆ ಬರುವರು)

**ಸಿಂಹ**—ಸೋದರರೇ! ಈ ಸಂದರ್ಭದಲ್ಲಿ ನೀವು ಕುಪಿತರಾಗ ಬಾರದು. ಶಾಂತರಾಗಿರಿ. ಹಿಂದೆ ಬನ್ನಿ. ನನ್ನ ಪವಿತ್ರ ಕಾರ್ಯವನ್ನು ನಾನು ಮಾಡಿರುತ್ತೇನೆ. ನಿಮ್ಮ ನಿಜಸ್ವರೂಪವನ್ನು ನಿಮಗೆ ತಿಳಿಸಿರುತ್ತೇನೆ. ನಾನು ಬಂದಿಯಾಪೆನೆಂದು, ಅಥವಾ ಸಾಯುವೆನೆಂದು ನಿಮ್ಮ ಕರ್ತವ್ಯ ದಿಂದ ಸರಿಯಬೇಡಿ. ಧೀರ ರಾವಲರ ಸೋದರರೇ! ಸ್ವಾತಂತ್ರ್ಯವೇ ನಿಮ್ಮ ಧ್ಯೇಯವೆಂಬುದನ್ನರಿತು ಜೀವವನ್ನು ಈ ಧರ್ಮಕಾರ್ಯಕ್ಕೆ ವಿಾಸ ಲಾಗಿಟ್ಟು ಒಗ್ಗಟ್ಟಿನಲ್ಲಿ ಕೆಲಸಮಾಡಿರಿ– ಜೈ ರಾವಲಮಾತೇ!

(ಎಲ್ಲರೂ ಜೈ-ಜೈ-ಜೈ)

[ಸಿಂಹನನ್ನು ಬಂಧಿಸುವರು]

**ಇಂದ್ರ**—ನಡೆಯುರಿ-ರಾಜರ ಬಳಿಗೆ ಇವನನ್ನು ಕರೆದುಕೊಂಡು ಬನ್ನಿ. ನಾನು ಮುಂದೆ ವರ್ತಮಾನವನ್ನು ಅವರಿಗೆ ತಿಳಿಸುತ್ತೇನೆ.

[ಹೊರಡುವನು]

**ಸೋನ**—(ಗದ್ಗದ ಸ್ವರದಿಂದ) ಸಿಂಹ! ಸಿಂಹ!

**ಸಿಂಹ**—ಸೋನ! ಏನಿದು? ಏಕೆ ಹೀಗೆ ಅಮಂಗಳ ಧ್ವನಿಯಿಂದ ಕೂಗುತ್ತೀ! ಜಯಘೋಷಮಾಡು, ಸ್ವಾತಂತ್ರ್ಯ ಚಳುವಳಿಯು ಸಿದ್ಧಿಸಿ ತೆಂದು.

**ಸೋನ**—(ಕಂಬನಿದುಂಬಿ. ಕಿವಿಯಲ್ಲಿ) ನಿನ್ನನ್ನು ಏನುಮಾಡು ವರೋ?

**ಸಿಂಹ**— ಭಯವಿಲ್ಲ ಸೋನ! ನನ್ನ ಕಾರ್ಯವನ್ನು ನಾನು ಮಾಡಿರುವೆ! ... ...ಇನ್ನೂ ನಡೆಯಬೇಕಾದುದು ಬಹಳವಿದೆ ......ನಮ್ಮ ಗು ....ಅವರ ದರ್ಶನ ಪಡೆದು ಮುಂದಿನ....ತಿಳಿದು ಅದರಂತೆ....ಆಂ? ಇಂತಹ ಗುರುತರ ಸಂದರ್ಭದಲ್ಲಿ ನಮ್ಮ ಪರಸ್ಪರ ಪ್ರೇಮವು ಕಾರ್ಯಕ್ಕೆ ಭಂಗತಾರದಿರಲಿ. ನೀನು ಇಲ್ಲಿಯೇ ನಿಲ್ಲು. ಸೋನ-ಗು .. ಅವರು— ನಾಳೆ— ಆಂ? ದುಃಖವನ್ನು ದೂರಮಾಡು! ವ್ಯಕ್ತಿಪ್ರೇಮವನ್ನು ಬದಿಗೊತ್ತು. ನಾಡಿನ ಸೌಭಾಗ್ಯವು ಉದಯಿಸಿದೆ! (ಎಳೆದುಕೊಂಡು ಹೋಗುವರು) ನಿಲ್ಲು! ಸೋನ-(ಒಳಗಿಂದ) ಜೈ! ರಾವಲಮಾತೇ!

[ಎಲ್ಲರೂ ಜಯಕಾರ ಮಾಡುವರು. ಸೋನನು ದುಃಖಿಸುತ್ತಾ ನಿಲ್ಲುವನು]

## ದೃಶ್ಯ ೫

(ಮಯೂರವರ್ಮನ ಆಸ್ಥಾನ–ಮಯೂರವರ್ಮನು ಕುಳಿತಿರುವನು. ಇಂದ್ರಸೇನನು ನಿಂತಿರುವನು. ಪರಿವಾರದವರು ಬಂದಿಯಾದ ಸಿಂಹನನ್ನು ಎದುರಿನಲ್ಲಿ ಹಿಡಿದು ನಿಲ್ಲಿಸಿರುವರು)

**ಮಯೂರ**— ಇಂದ್ರಸೇನ! ನಾನು ಮುಂಚಿನಿಂದಲೂ ಹೇಳುತ್ತಿರಲಿಲ್ಲವೇ ಜಬಲನ ಮಗನು ದ್ರೋಹಿಯೆಂದು.

**ಇಂದ್ರ**— ದ್ರೋಹಿಗಳಿಗೆಲ್ಲಾ ಗುರುವಾಗಿರುವನು ಮಹಾರಾಜಾ! ಜನರ ಮುಂದೆ ನಮ್ಮನ್ನು— ಆರ್ಯರನ್ನು, 'ಮೃಗಗಳು, ಹಗಲು ಗಳ್ಳರು, ದ್ರೋಹಿಗಳು' ಎಂದು ದೂಷಿಸಿ ಅವರನ್ನು ಎತ್ತಿಕಟ್ಟುತ್ತಿರುವನು.

**ಮಯೂರ**— ಪೂಜ್ಯರಾದ ನಾವೇ ಮೃಗಗಳಾದ ಮೇಲೆ ಈ ರಾವಲ ಹಂದಿಗಳು?

**ಸಿಂಹ**— ಹಾಂ! ತಡೀ ನಿನ್ನ ನಾಲಿಗೆಯನ್ನು, ಮಯೂರವರ್ಮ!

**ಇಂದ್ರ**— ಚಂಡಾಲಾ! ಮಹಾರಾಜರನ್ನು ಏಕವಚನದಲ್ಲಿ . ಮುಚ್ಚು ಬಾಯಿ.

**ಸಿಂಹ**— ನಿನಗೆ ಇವನು ರಾಜನಾಗಿರಬಹುದು. ಆದರೆ ನನಗೆ, ನಮ್ಮ ರಾವಲ ಸೋದರರಿಗೆ ದ್ರೋಹಿಯು—

**ಮಯೂರ**— ಇಂದ್ರಸೇನ! ಸುಮ್ಮನಿರು. ಅವನ ಇಷ್ಟ ಬಂದಂತೆ ಕೂಗಾಡಲಿ. ಈ ರಾಜದ್ರೋಹಿಗೆ ತಕ್ಕ ಶಿಕ್ಷೆಯನ್ನು ಇಲ್ಲೇ ವಿಧಿಸು

ತ್ತೇನೆ—ಲೋ ಸಿಂಹ! ನಿಮ್ಮ ತಂದೆಯು ನಮಗೆ ವಿಧೇಯನಾಗಿದ್ದು ಕೊಂಡು ರಾಜ್ಯಾಡಳಿತದಲ್ಲಿ ಬಲಗೈಯಾಗಿರುವುದರಿಂದ, ಅವನಿಗಾಗಿ ನಿನ್ನನ್ನು ಇಷ್ಟು ದಿವಸಗಳು ಶಿಕ್ಷಿಸದೆ ಬಿಟ್ಟದ್ದು. ಅಂತಹನ ಹೊಟ್ಟೆಯಲ್ಲಿ ಹುಟ್ಟಿದ ನೀನು ಇಂತಹ ದ್ರೋಹಕಾರ್ಯಕ್ಕೆ ಕೈಹಾಕಿದುದು ಶುದ್ಧ ತಪ್ಪು-

**ಸಿಂಹ**—ದ್ರೋಹಿಗಳಿಗೆ ದ್ರೋಹಿಗಳು ಗುಲಾಮರಾಗುವುದೇನಾಶ್ಚರ್ಯ! ಹೇಳು—ಹೊರಗಿಂದ ಇಲ್ಲಿಗೆ ಬಂದು ರಕ್ಷಣೆ ಬೇಡಿದ ನೀವು, ಮೋಸದಿಂದ ದಿನದಿನಕ್ಕೆ ನಮ್ಮನಮ್ಮಲ್ಲೆ ಅಂತಃ ಕಲಹಗಳನ್ನು ತಂದಿಟ್ಟು ನಡುವೆ ನಿಂತು ಇಬ್ಬರನ್ನೂ ಬಡಿದು, ನಮ್ಮನ್ನವನ್ನು ತಿಂದು ನಮಗೇ ಎರಡನ್ನು ಬಗೆದು, ನಮ್ಮ ಮಾನ, ಗೌರವ, ಸ್ವಾತಂತ್ರ್ಯಗಳನ್ನು ಕದ್ದು, ರಾವಲರಿಗೆ ಹೇಯವಾದ ಸುರಾ, ಸೋಮಪಾನಗಳ, ಆರ್ಯವೇಷಗಳ ಅನುಕರಣೆಯ ದುಷ್ಟಪಿಶಾಚಿಯನ್ನು ಹಿಡಿಸಿ ಅವರ ರಕ್ತವನ್ನೇ ಹಿಂಡಿ ಹೀರುತ್ತಿರುವ ನೀವು ದೊಡ್ಡ ದ್ರೋಹಿಗಳಲ್ಲವೊ?....ಇಂಥವರ ಗುಲಾಮರಾಗಿ ತನ್ನ ಸೋದರರ ಮಾನ, ಸಂಪತ್ತು ಜೀವಗಳನ್ನೇ ನಿಮ್ಮ ಪೈಶಾಚವೃತ್ತಿಗೆ ಆಹುತಿ ಕೊಡುತ್ತಿರುವ ನಮ್ಮ ತಂದೆಯೂ ದೊಡ್ಡ ದ್ರೋಹಿಯೇಸರಿ!....ದ್ರೋಹಿಗಳಿಗೆ ದ್ರೋಹಿಗಳು ಗುಲಾಮರಾಗುವರೇ ಹೊರತು ನಿಜವಾದ ರಾವಲರು ಎಂದೆಂದಿಗೂ ಸ್ವತಂತ್ರರು

**ಮಯೂರ**—ಕೇಳಿದೆಯೋ ಇಂದ್ರಸೇನ?—ಇವನ ದ್ರೋಹಚಿಂತನೆಯು ಮನೆಯಲ್ಲಿಯೇ ಆರಂಭವಾಗಿರಬೇಕು. ಮೊದಲು ಪಿತೃದ್ರೋಹಿಯಾಗಿ ಆಮೇಲೆ ರಾಜದ್ರೋಹಿಯಾಗಿರುವನು.

**ಇಂದ್ರ**—ಇವನು ಮನೆಯನ್ನು ಬಿಟ್ಟು ಬಹುದಿವಸಗಳಾದುವಂತೆ.

**ಮಯೂರ**—ಅಂದಿನಿಂದ ಜನರಲ್ಲಿ ಪಿತೂರಿ ನಡೆಯಿಸಿ ಎತ್ತಿ ಕಟ್ಟುತ್ತಿರುವನು.

**ಸಿಂಹ**—ಎತ್ತಿ ಕಟ್ಟಿರುವನು-ಮಯೂರ! ಇಷ್ಟರಲ್ಲೇ ನಿಮ್ಮ ದ್ರೋಹದ ಫಲವನ್ನನುಭವಿಸುವಿರಿ. ಆಮೇಲೆ ನೀವು ಇಲ್ಲಿಗೆ ಕಾಲಿಟ್ಟಂದಿನಿಂದ ಇದುವರೆಗೂ ನಡೆಯಿಸಿರುವ ಅನ್ಯಾಯಕ್ಕೆ, ಅಕೃತ್ಯಕ್ಕೆ, ದ್ರೋಹಕ್ಕೆ, ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಪುನೀತರಾಗುವಿರಿ. ಅದಕ್ಕೆ ಹಾದಿತೋರಲು, ಪ್ರತಿಯೊಬ್ಬ ರಾವಲನೂ ಸ್ವಾತಂತ್ರ್ಯಕಾಂಕ್ಷೆಯೆಂಬ

ಹಾಲನ್ನು ಕುಡಿದು ಟೊಂಕಕಟ್ಟಿ ನಿಂತಿರುವನು. ಧೀರ ರಾವಲರ ಸ್ವಾತಂತ್ರ್ಯ ಘೋಷವು ನಿನ್ನನ್ನೂ ಈ ನಿನ್ನ ನರಿಗಳನ್ನೂ ಇಷ್ಟರಲ್ಲೇ ನಡುಗಿಸದಿರದು. ಎದುರು ನೋಡುತ್ತಿರು ನಿನ್ನ ಕಾಲವು ಹತ್ತಿರಿದೆ.

**ಮಯೂರ**—(ಬಲವಂತದಿಂದ ನಗುತ್ತಾ) ಇಂದ್ರಸೇನ!! ಇದು ಬಹಳ ವಿಚಿತ್ರ ವಿನೋದವಾಗಿದೆ. ನಮ್ಮ ರಾಜ್ಯದಲ್ಲಿ ನಮ್ಮ ಕೈಲಿ ಬಂದಿಯಾಗಿರುವ ಇವನು ನಾವಾಡುವ ಮಾತುಗಳನ್ನು ತಾನೇ ಆಡುತ್ತಿರುವನು.—ಜಬಲನ ಮಗನಲ್ಲವೋ? ಎಲ್ಲೋ ಸುರಾಪಾನವು ಸ್ವಲ್ಪ ಮಿತಿ ಮೀರಿ ಬುದ್ಧಿಯನ್ನು ಕುಲುಕುತ್ತಿರಬಹುದು.

(ಇಂದ್ರಸೇನನು ಹ ಹ್ಹ ಹ್ಹಾ ಎಂದು ನಗುವನು)

**ಸಿಂಹ**—ನಿನ್ನ ವ್ಯರ್ಥ ಪ್ರಲಾಪವು ಸಾಕು. ನೀನು ಈಗ ಏನು ಮಾಡಬೇಕೆಂದಿರುವೆಯೋ ಬೊಗಳು-

**ಮಯೂರ**—(ಕಣ್ಣುಗಳು ಕೆಂಪೇರಿ) ಲೋ ಹಂದೀ! ರಾವಲ ಪಿಶಾಚಿಯೇ! ಹುಡುಗನೆಂದು ಸೈರಿಸಿದರೆ, ಮರೆತು ರಾಜರೆಂಬ ಭೀತಿಯಿಲ್ಲದೆ ಮನಬಂದಂತೆ ಕೂಗುವೆಯಾ?

**ಸಿಂಹ**—ಲೋ! ಆರ್ಯ ಮೃಗವೇ! ರಾವಲರು ನಿನ್ನ ಭಾಗಕ್ಕೆ ಹಂದಿಗಳೂ, ಪಿಶಾಚಿಗಳೂ, ಆಗಿರುವರಲ್ಲದೆ ಯಮದೂತರೂಆಗಿರುವರೆಂದು ತಿಳಿ. ಪ್ರತಿದಿನವೂ ನೀನು ತಿನ್ನುವ ಅನ್ನವು ರಾವಲರದಲ್ಲವೋ? ನೀನು ಕುಡಿಯುವ ಗಾಳಿಯು ಕೂಡ ರಾವಲ ರಾಜ್ಯದ್ದಲ್ಲವೋ? ಕೃತಘ್ನನಾದ ನೀನು ಯಾರಿಗೆ ರಾಜನೋ? ಕೇಳೊ-ಧರ್ಮಕ್ಕೆ ಧರ್ಮವೂ, ದಯೆಗೆ ದಯೆಯೂ, ನ್ಯಾಯಕ್ಕೆ ನ್ಯಾಯವೂ ಮರ್ಯಾದೆ ಮಾಡುವುದೇ ಹೊರತು, ಅನ್ಯಾಯ-ಅ ಧ ಮ ರ್ಮ-ನಿರ್ದಯಗಳನ್ನು, ಧರ್ಮ-ಸತ್ಯ-ನ್ಯಾಯಗಳು ಎಂದಿಗೂ ಮನ್ನಿಸವು. ಅವುಗಳನ್ನು ನಿರ್ಭಯದಿಂದ ಎದುರಿಸಿ, ತುಳಿದು, ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿ ಸ್ಥಿರಗೊಳಿಸುವುವು. ಇದೇ ಅಲ್ಲವೇನೋ ನಿಮ್ಮ ಆರ್ಯರ ಮತ?

**ಮಯೂರ**—ಆರ್ಯಮತವು ನಿನ್ನಂತಹ ದಸ್ಯುವಿಗೆ, ಅನಾರ್ಯ ಪಶುವಿಗೆ ತಿಳಿಯುವುದೇನೊ?

**ಸಿಂಹ**—ಆ ಆರ್ಯ ಮತವನ್ನು ಧರ್ಮ್ಯ ಸತ್ಯಗಳು ಆಳದಿದ್ದರೆ

ಆ ನಿಮ್ಮ ಮತವನ್ನು ಸುಡು....ಮಯೂರ! ಪೂಜ್ಯರೆಂದು ಹೊಗಳಿ ಕೊಳ್ಳುವ ನೀವು ಪ್ರಪಂಚದಲ್ಲಿನ ಸಮಸ್ತ ವಸ್ತುಗಳೂ, ಪ್ರಾಣಿಗಳೂ ಒಂದೇ ಪರಬ್ರಹ್ಮಸ್ವರೂಪವೆಂದು ಬಾಯಲ್ಲಿ ಬೊಗಳುತ್ತಾ, ಕೈಯಲ್ಲಿ ಮಾಡ ಬಾರದ ಕಾರ್ಯಗಳನ್ನು ಮಾಡುತ್ತಾ, ಸಹಸ್ರಾರು ಹಸು, ಕುದುರೆ, ಕುರಿ, ಮೇಕೆಗಳನ್ನು ಕಟುಕರಂತೆ ಕೊಯ್ದು ದೇವರ ಹೆಸರನ್ನು ಹೇಳಿ ತಿನ್ನುತ್ತಾ, ಇತರ ಜನರ ರಕ್ತವನ್ನು ಸಜೀವರಾಗಿರುವಾಗಲೇ ಹಿಂಡಿ ಹೀರುತ್ತಿರುವಿ ರಲ್ಲಾ! ನೀವು ಮತದ್ರೋಹಿಗಳೂ ದೈವದ್ರೋಹಿಗಳೂ ಅಲ್ಲವೋ? ನಿಮ್ಮ ಚಂಡಾಲ ಕೃತ್ಯಕ್ಕೆ ನಿಮ್ಮ ದೇವರುಗಳೇ ನಿಮ್ಮನ್ನು ಶಿಕ್ಷಿಸುವರೆಂಬುದನ್ನು ತಿಳಿ.

**ಮಯೂರ**—ನಾಸ್ತಿಕರಾದ ಹಂದಿಗಳಿಗೆ ದೇವರ ವಿಷಯವೇಕೊ?

**ಸಿಂಹ**—ನಾವು ನಾಸ್ತಿಕರಾದರೂ ಸತ್ಯ ಧರ್ಮಗಳೇ ನಮ್ಮ ದೇವರು ಗಳು, ಸ್ವಾತಂತ್ರ್ಯವೇ ನಮ್ಮ ಜೀವನ ಧ್ಯೇಯ. ನ್ಯಾಯವೇ ನಮ್ಮ ಹಾದಿ. ಇವುಗಳ ರಕ್ಷಣೆಗೆ ನಮ್ಮ ಪ್ರಾಣಗಳೇ ಬಲಿ-ಇದೇ ನಮ್ಮ ಯಜ್ಞ. ಇದೇ ನಮ್ಮ ಸ್ವರ್ಗ. ಸತ್ಯ ಧರ್ಮಗಳಲ್ಲಿ ನಮಗಿರುವ ಪೂರ್ಣಭಕ್ತಿಯೇ ನಿಮ್ಮಂಥ ನಾಯಿಗಳನ್ನು ಓಡಿಸುವ ಅಸ್ತ್ರ, ತಿಳಿಯಿತೇ?

**ಮಯೂರ**—ಬಾಯಿ ಮುಚ್ಚು! ರಾವಲ ಪಿಶಾಚಿ!

**ಇಂದ್ರಸೇನ**—ಇನ್ನು, ಈ ದ್ರೋಹಿಯು ಭೂಮಿಯ ಮೇಲಿದ್ದಷ್ಟು ರಾಜ್ಯಕ್ಕೆ ಕೇಡು. ಕರೆದುಕೊಂಡುಹೋಗಿ ಎಡಮಾರಿನಾಚೆಯಿರುವ ಬೆಟ್ಟದ ತುದಿಯಿಂದ ಕೆಳಗಿರುವ ಕಣಿವೆಗೆ ತಳ್ಳಿಬಿಡಿ.....ಲೋ ಸಿಂಹ! ಕೊನೆಯ ಮಾತಾಗಿ ಜಬಲನ ಮೇಲೆ ಕನಿಕರವಿಟ್ಟು ಹೇಳುತ್ತೇನೆ, ನಿನ್ನ ಕೊಬ್ಬನ್ನು ತಗ್ಗಿಸಿ, 'ಇನ್ನು ಮೇಲೆ ವಿಧೇಯನಾಗಿ ನಡೆದುಕೊಳ್ಳುವೆ ನೆ'ಂದು ಮಾತುಕೊಟ್ಟು, ನಿನ್ನ ದ್ರೋಹಕ್ಕೆ ಪಶ್ಚಾತ್ತಾಪಪಟ್ಟು ಕ್ಷಮೆ ಬೇಡಿದರೆ ಈಗಲೂ ಜೀವದಾನಮಾಡುತ್ತೇನೆ.

**ಸಿಂಹ**—ಲೋ; ಹಗಲುಗಳ್ಳನೇ! ನಮ್ಮ ಮನೆಯ ಯಜಮಾನಿ ಕೆಯು ನಮ್ಮದೆನ್ನುವ ನಾನು ದ್ರೋಹಿಯೋ, ಪರರ ಮನೆಗೆ ಭಿಕ್ಷಕ್ಕೆ ಬಂದು ಒಳಗೆ ನುಗ್ಗಿ ಯಜಮಾನರನ್ನು ತಳ್ಳಿ ಮನಬಂದಂತೆ ವರ್ತಿಸು ತ್ತಿರುವ ನೀನು ದ್ರೋಹಿಯೋ ನೀನೇ ಬೊಗಳು—ಇನ್ನ ಈ ಹಗಲುಗಳ್ಳ

ತನಕ್ಕೆ ಪಶ್ಚಾತ್ತಾಪಟ್ಟು, ದಯಾಳುಗಳಾದ ರಾವಲರ ಕ್ಷಮ ಬೇಡಿ ಹೊರಡುವುದಾದರೆ ನಿನಗೆ ಜೀವದಾನವಾಗುವುದು. ಇಲ್ಲದಿದ್ದರೆ ಮೂವತ್ತುಸಾವಿರ ಧೀರ ರಾವಲರ ಸ್ವಾತಂತ್ರ್ಯ ಜಯಘೋಷವೇ ನಿನ್ನನ್ನೂ, ನಿನ್ನ ಪರಿವಾರದವರನ್ನೂ ಇಲ್ಲಿಂದ ಮಡುವಿಗೆ ಹಾರಿಸಿ ತುಳಿಯುವುದು. ನಿನ್ನ ಮನಸ್ಸಿನಲ್ಲಿಟ್ಟಿರು. ಸಿಂಹನ ಕಡೆಯ ಮಾತುಗಳು ನಿನ್ನ ಹೃದಯವನ್ನಿರಿಯಲಿ. ಮಯೂರ! ದ್ರೋಹೀ! ನನ್ನೊಬ್ಬನ ಪ್ರಾಣವನ್ನು ಕದಿಯುವುದರಿಂದ ಮೂವತ್ತುಸಾವಿರ ಧೀರ ರಾವಲರ ಕಣಕಣದಲ್ಲೂ ಕೂಡಿರುವ ಸ್ವಾತಂತ್ರ್ಯೇಚ್ಛೆಯನ್ನು ಎಳ್ಳಿನಷ್ಟೂ ಕದಲಿಸಲಾರದೆಂಬುದನ್ನು ತಿಳಿ! ನಿನ್ನ ಕಾಲವು ಸಮಾಪಿಸಿದಾಗ ಸಿಂಹನ ವಾಣಿಯು ನಿನ್ನ ಕಿವಿಯಲ್ಲಿ ಮೊಳಗಲಿ!!.... ಜೈ! ಜೈ! ರಾವಲಮಾತೇ?

[ಹೊರಡಲಿರುವನು]

**ಮಯೂರ**—ತಡೀ! ಇಂದ್ರಸೇನ! ಇವನಂತೆ ಇರುವ ಇತರ ದ್ರೋಹಿಗಳ್ಯಾರು? ಕೇಳು!

**ಇಂದ್ರ**—ಅದನ್ನು ಅವನು ಹೇಳುವುದಿಲ್ಲ, ಮಹಾರಾಜ.

**ಮಯೂರ**—ಇರಲೀ! ನಾವೇಗೊತ್ತು ಮಾಡಿಸುತ್ತೇವೆ. ಕರೆದೊಯ್ಯಿರಿ.—

[ಸಿಂಹನನ್ನು ಎಳೆದುಕೊಂಡು ಹೋಗುವರು]

**ಮಯೂರ**—ಇಂದ್ರಸೇನ! ಈ ರಾವಲ ಪಿಶಾಚಿಗಳೆಲ್ಲರಿಗೂ ಈ ದುರ್ಭೋದನೆಯಾಗಿರುವುದೋ?

**ಇಂದ್ರ**!—ಅಹುದು ಮಹಾರಾಜ! ಎಲ್ಲರೂ ಒಳಗೊಳಗೇ ಸಿದ್ಧರಾಗುತ್ತಿರುವರು.

**ಮಯೂರ**—ಇದು ಇವನೊಬ್ಬನ ಕೆಲಸವಲ್ಲ.

**ಇಂದ್ರ**—ಎಂದಿಗೂ ಅಲ್ಲ! ಯಾವನೋ ಒಬ್ಬ ದೊಡ್ಡ ದ್ರೋಹಿಯು ಇಂತಹವರನೇಕರನ್ನು ಎತ್ತಿ ಕಟ್ಟುತ್ತಿರುವನು. ಸಿಂಹನಂತೇ ಇತರರು ಬಹಳ ಮಂದಿ ಬಹು ದಿವಸಗಳಿಂದ ಇದಕ್ಕಾಗಿ ಕೆಲಸ ಮಾಡುತ್ತಿರುವರು. ಆದರೆ ಅವರ ಪೈಕಿಯೆಲ್ಲಾ ಸಿಂಹನೇ ಈರೀತಿ ಹಗಲಿನಲ್ಲಿ, ಬಹಿರಂಗವಾಗಿ ತನ್ನ ದ್ರೋಹಕಾರ್ಯವನ್ನು ನಡೆಯಿಸುತ್ತಿರುವನು.

**ಮಯೂರ**—ಯಾರೂ ಎದುರಿಸಿ ಗೆಲ್ಲಲಾರದ ಈ ರಾವಲ ಹೋರಿಗಳನ್ನು ನಾವು ಉಪಾಯದಿಂದ ಗೆದ್ದುತುಳಿದು ಆಳುತ್ತಿರುವೆವು. ಈಗ ಈ ಮೂವತ್ತು ಸಾವಿರ ಜನರು ಒಮ್ಮೆಲೇ ದಂಗೆ ಎದ್ದರೆ ರಾಜ್ಯವು ಕೈಬಿಟ್ಟಂತೇ! ಆದುದರಿಂದ ನಮಗೆ ವಿಧೇಯರಾಗಿರುವ ಪಶುಗಳಿಗೆ ಮತ್ತಷ್ಟು ಸುರಸೋಮಗಳನ್ನು ಕುಡಿಸಿ, ಆಶೆಯುನ್ನುಂಟುಮಾಡಿ, ಅವರನ್ನು ಜನರೊಳಕ್ಕೆ ಬಿಟ್ಟು ಅವರಲ್ಲೇ ಅಂತಃಕಲಹಗಳಾಗುವಂತೆ ಸಂಚು ನಡೆಯಿಸಬೇಕು. ಎಡಮಾರಿನವರಿಗೂ ಬಲಮಾರಿನವರಿಗೂ ಜಗಳವನ್ನು ತಂದುಹಾಕಬೇಕು. ಇದನ್ನು ಹೇಗೆ ಮಾಡಬೇಕೋ ಯೋಚಿಸು.

(ಇಷ್ಟರಲ್ಲೇ ಜಬಲನು ಹುಚ್ಚನಂತೆ ಕೂಗುತ್ತಾ ಬರುವನು. )ಇಂದ್ರಸೇನನು ಹಿಂದೆ ಸರಿಯುವನು.)

**ಜಬಲ**—ಸಿಂಹ!—ಸಿಂಹ!—ನನ್ನ ಮುದ್ದು ಕಂದ! . .ಎಲ್ಲಿ ನನ್ನ ಸಿಂಹನೆಲ್ಲಿ? ನನ್ನ ಮುದ್ದು ಮಗುವೆಲ್ಲಿ?—ಯಾರು ನನ್ನ ಕಂದನನ್ನು ಎಲ್ಲಿಗೊಯ್ದಿರುವಿರಿ?....ನನ್ನ ಸಿಂಹನನ್ನು ಯಾರು ನೋಯಿಸಿದರೂ ಅವರ ಕರುಳನ್ನು ಕಿತ್ತು ನಾಯಿನರಿಗಳಿಗೆ ಹಾಕುತ್ತೇನೆ! !—ಎಲ್ಲಿ?

**ಮಯೂರ**—(ಎದ್ದುಬಂದು, ವೈದಡವಿ) ಜಬಲಾ? ಏನಿದು ನಿನ್ನ ಹುಚ್ಚುತನ?

**ಜಬಲ**—ಹುಚ್ಚುತನವಲ್ಲ. ನನ್ನ ಮಗನನ್ನು ಇಲ್ಲಿಗೆ ಹಿಡಿದು ತಂದಿರಂತೆ. ಅವನೆಲ್ಲಿರುವನು ತೋರಿಸಿ—ನನ್ನ ಸಿಂಹನೆಲ್ಲಿರುವನು?

**ಮಯೂರ**—ನಿನಗೂ, ನಿನ್ನ ರಾಜರಿಗೂ ದ್ರೋಹಮಾಡಿದ ಆ ನೀಚನಿಗೆ ಮರಣದಂಡನೆ ವಿಧಿಸಿ ಕಳುಹಿಸಿದೆ. ಅವನ ಅವತಾರವು ಈ ವೇಳೆಗೆ ಪೂರೈಸಿರಬೇಕು.

**ಜಬಲ**—ಹಾಂ! ಸಿಂಹನಿಗೆ ಮರಣದಂಡನೆಯೆ! ಇದು ನಿಜವೇ! ಯಾರು ವಿಧಿಸಿದವರು?

**ಮಯೂರ**—ನಾನು.

**ಜಬಲ**—ಆಂ....ದ್ರೋಹಿ....(ಹಲ್ಲು ಕಡಿಯುವನು)

**ಇಂದ್ರ**—(ಮುಂದೆ ಬಂದು ಕತ್ತಿಯನ್ನು ಹಿಡಿದು) ಜಬಲ! ಎಚ್ಚರ ಹೊಂದು....ದಯಾಳುಗಳಾದ ರಾಜರಲ್ಲಿ ನಿನ್ನ ಕೋರಿಕೆಯನ್ನು ತಿಳಿಸು.

**ಜಬಲ**—ಸಿಂಹ!....ಸಿಂಹ! ...(ರಾಜನ ಕಡೆಗೆ ತಿರುಗಿ) ಮಹಾರಾಜ! ನಿಮ್ಮ ಪಾದದಲ್ಲಿ ತಲೆಯಿಟ್ಟು ಬೇಡಿಕೊಳ್ಳುತ್ತೇನೆ ತಡೆಯಿರಿ. ನನ್ನ ಮೇಲೆ ಕೃಪೆ ಮಾಡಿ ಆ ನನ್ನ ಮುದ್ದು ಕಂದನನ್ನು ಹಿಂಸಿಸಬೇಡಿ. ಅವನು ಖಂಡಿತವಾಗಿಯೂ ದ್ರೋಹಿಯಲ್ಲ! ನಿಮಗೆ ಹಾಗೆ ತೋರಿದರೆ ಅವನನ್ನೂ ಕರೆದುಕೊಂಡು ನಾನು ಈ ರಾಜ್ಯವನ್ನೇ ಬಿಟ್ಟು ಹೊರಡುತ್ತೇನೆ. ಮಹಾರಾಜ! ನನ್ನ ಸಿಂಹನನ್ನು ಕ್ಷಮಿಸು!—

**ಮಯೂರ**—ಅದಾಗದು ಜಬಲ!—ಆ ದ್ರೋಹಿಯು ನಿನ್ನನ್ನೇ ದ್ರೋಹಿಯೆಂದೂ, ನೀಚನೆಂದೂ, ರಾಪಲರಲ್ಲಿ ಹುಟ್ಟಬಾರದಾಗಿತ್ತೆಂದೂ ಮನಬಂದಂತೆ ಬೈಯ್ಯುತ್ತಾ, ನಮ್ಮನ್ನು ಹಂದಿಗಳು, ನಾಯಿಗಳು, ಹಗಲುಗಳ್ಳರು ಎಂದು ಸ್ವಲ್ಪವೂ ಭಯಭಕ್ತಿ ಇಲ್ಲದೆ ನಿಂದಿಸುವನಲ್ಲಾ! ಅಂತಹ ಪಾಪಿಯೂ, ಪಿತೃದ್ರೋಹಿಯೂ ಆದವನು ಬದುಕಿರಬಾರದು. ಅವನು ಸಭ್ಯನಾದ ನಿನ್ನ ಹೊಟ್ಟೆಯಲ್ಲಿ ಹುಟ್ಟಬಾರದಾಗಿದ್ದಿತು—ಜಬಲಾ! ಅವನು ನಿನ್ನ ಮಗನಲ್ಲ—ನಿನ್ನ ಹಿಂದಿನ ಜನ್ಮದ ಶತ್ರು.

**ಜಬಲ**—(ದುಃಖದಿಂದ) ಸಿಂಹ!....ಸಿಂಹ! ನನ್ನನ್ನು ನೀನು ಎಷ್ಟು ಬೈದರೂ ನನಗೆ ಸಂತೋಷವೇ! ಆದರೆ..ಆದರೆ....ಹೆರರನ್ನು ದೂಷಿಸುವುದೇ?....ಅಯ್ಯೋ ಕಂದಾ! ನಿನಗೆ ಯಾರು ಈ ದುರ್ಬೋಧನೆ ಮಾಡಿ ನಿನ್ನ ಬಾಳಿಗೇ ಭಂಗ ತಂದರೋ? ಮಗನೇ!

**ಮಯೂರ**—ಆ ದೊಡ್ಡ ದ್ರೋಹಿಯು ಸಿಕ್ಕಿದರೆ ಅವನನ್ನು ನಾಯಿ ನರಿಗಳಿಗೆ ಹದ್ದು ಕಾಗೆಗಳಿಗೆ ಆಹುತಿ ಕೊಡುತ್ತೇನೆ.

**ಜಬಲ**—ಮಹಾರಾಜ! ನನ್ನ ಸಿಂಹನನ್ನು ಕ್ಷಮಿಸಿ. ನಾನು ಅವನೊಡನೆ ರಾಜ್ಯವನ್ನೇ ಬಿಟ್ಟು ದಂಡಕಾರಣ್ಯಕ್ಕೆ ಹೋಗಿ ವಾಸಿಸುತ್ತೇನೆ. ನಾನು ಇಷ್ಟು ದಿವಸಗಳೂ ನಿರ್ವಂಚನೆಯಿಂದ ನಿಮ್ಮ ಸೇವೆ ಮಾಡಿದ್ದಕ್ಕೆ ನೀವು ಈ ನನ್ನ ಸಣ್ಣ ಕೋರಿಕೆಯನ್ನು ನಡೆಯಿಸದಿದ್ದರೆ ಸಿಂಹನ ಮಾತೇ ಸತ್ಯವಾಗುವುದು ...ಮಹಾರಾಜ! ನೀವು ಧರ್ಮಿಷ್ಠರು ಕರುಣಾಳುಗಳು ಎಂಬುದನ್ನು ನಮ್ಮ ಜನರಿಗೆ ತೋರಿಸಿ, ಅವರ ಶಾಶ್ವತವಾದ ನಂಬಿಕೆಯನ್ನು ಪಡೆದು, ಅವಿಚ್ಛಿನ್ನವಾಗಿ ರಾಜ್ಯಭಾರ ಮಾಡಲಿಚ್ಛಿಸುವಿರಾದರೆ ನನ್ನ ಈ ಕೋರಿಕೆಯನ್ನು ನಡೆಯಿಸಿ.

**ಮಯೂರ**—ನೀನು ಆ ನಿನ್ನ ಮಗನನ್ನು ಈಗಲಾದರೂ ನಮಗೆ ವಿಧೇಯನಾಗಿರುವಂತೆ ಮಾಡುವೆನೆಂದು ಶಪಥಮಾಡಿ ಹೊರಟು ಅವನು ನಿನ್ನಂತಿರುವ ಹಾಗೆ ಮಾಡು! ಅವನಿಗೆ ಜೀವದಾನ ಮಾಡುತ್ತೇನೆ.

**ಜಬಲ**—ಅಗತ್ಯವಾಗಿ ಮಾಡುತ್ತೇನೆ ಮಹಾರಾಜ! ಪರರ ಹೇಳಿಕೆಯಿಂದ ಸಿಂಹನು ಹಾಗೆ ಕುಣಿಯುತ್ತಿರುವನೇ ಹೊರತು, ಸ್ವಭಾವತಃ ಬಹು ಒಳ್ಳೆಯವನು.

**ಮಯೂರ**—ಖಂಡಿತವಾಗಿಯೂ ಅವನನ್ನು ನಮಗೆ ವಿಧೇಯನನ್ನಾಗಿ ಮಾಡುವೆಯೋ?

**ಜಬಲ**—ಖಂಡಿತವಾಗಿ ಮಾಡಿ ಕರೆದುಕೊಂಡು ಬರುತ್ತೇನೆ.

**ಮಯೂರ**—ಹಾಗಾದರೆ ಹಿಡೀ ಈ ಉಂಗುರವನ್ನು, ಅವನನ್ನು ನಮ್ಮ ಪರಿವಾರದವರು ಆಗಲೇ ಕಣಿವೆಯಮೇಲಿನ ಗುಡ್ಡಕ್ಕೆ ಕರೆದುಕೊಂಡು ಹೋಗುತ್ತಿರುವರು. ನೀನು ಹೋಗಿ ಅವರಿಗೆ ಈ ಉಂಗುರವನ್ನು ತೋರಿಸಿ, ಶಿಕ್ಷೆಯನ್ನು ತಡೆಮಾಡಿ, ನಮ್ಮ ಬಳಿಗೆ ಕರೆದುಕೊಂಡು ಬಂದು ಕ್ಷಮೆಬೇಡಿಸು. (ಉಂಗುರವನ್ನು ಕೊಡುವನು).

**ಜಬಲ**—(ತೆಗೆದುಕೊಂಡು) ನೀವು ಬಹು ಉದಾರಿಗಳು ಮಹಾರಾಜ! (ಆತುರನಾಗಿ ಹೊರಟುಹೋಗುವನು).

**ಮಯೂರ**—(ಅತ್ತಕಡೆಯೇ ನೋಡುತ್ತಾ ಎದ್ದು ಮುಂದೆ ಬಂದು) ಇಂದ್ರಸೇನ! ಈ ಪಿಶಾಚಿಗಳ್ಯಾರನ್ನೂ ನಂಬಕೂಡದು. ಜಬಲನು ತನ್ನ ಮಗನೊಡನೆ ಸೇರಿ ತಾನೂ ರಾಜದ್ರೋಹಿಯಾಗಬಹುದು; ಅಥವಾ ..... ಆ ಸಿಂಹನನ್ನೊಪ್ಪಿಸಿದಂತೆಮಾಡಿ ವಿಧೇಯರಾಗಿರುವಂತೆ ನಟಿಸಿ, ಕೊನೆಗೆ ಸಮಯಬಂದಾಗ ಒಟ್ಟಿಗೆ ಸೇರಿ ಮೇಲೆಬೀಳಬಹುದು. ಈಗ ಏನುಮಾಡುವುದು?.... .(ಯೋಚಿಸುವನು).

**ಇಂದ್ರ**—ಇವನಿಗಿಂತ ಮುಂಚಿತವಾಗಿ ನಾನೇ ಕುದುರೆಯಮೇಲೇರಿ ಹೋಗಿ, ಅಲ್ಲಿನ ಕೆಲಸವನ್ನು ಇವನು ಬರುವವೇಳೆಗೇ ಪೂರೈಸಿಬಿಡುತ್ತೇನೆ.

**ಮಯೂರ**—ಛೆ! ಛೆ! ಅದು ಸರಿಯಲ್ಲ-ಕಂಡಂತೆ ಕೊಲ್ಲಬಾರದು. ಅಂತೂ ಆ ದ್ರೋಹಿಯು ಹಿಂತಿರುಗಬಾರದು.

**ಇಂದ್ರ**—(ಹತ್ತಿರ ಬಂದು) ವಿಷಪಾನ ಮಾಡಿಸಿದರೇ ?

**ಮಯೂರ**—ಅದು ಹೇಗೆ ಸಾಧ್ಯ ?

**ಇಂದ್ರ**—ಬಾಯಾರಿಕೆಯಿಂದ ಬಳಲಿ ನೀರನ್ನು ಕೇಳಿದರೆ ಅದರೊಡನೆ ಬೆರಸಿ ಕುಡಿಸಿಬಿಡುವುದು.

**ಮಯೂರ**—ಅವನು ನಮ್ಮಿಂದ ನೀರನ್ನು ಕುಡಿಯುವುದಿಲ್ಲವೆಂಬುದು ನಿನಗೆ ತಿಳಿಯದೋ ?

**ಇಂದ್ರ**—ಹಾಗಾದರೆ ಏನುಮಾಡುವುದು ... ?

**ಮಯೂರ**—ಏನಾದರೂ ಮಾಡಲೇಬೇಕು.

**ಇಂದ್ರ**—ಅವರ ಕಡೆಯಿಂಡಲೇ ಕೊಡಿಸಿದರೇ.

**ಮಯೂರ**—ನೀರನ್ನು ಕೇಳುವೆನೆಂಬುದೇನು ಗೊತ್ತು ?

[ಇಬ್ಬರೂ ಯೋಚಿಸಿದರು]

**ಇಂದ್ರ**—ನನಗೊಂದುಪಾಯ ತೋರುತ್ತದೆ.

**ಮಯೂರ**—ಏನು ?

**ಇಂದ್ರ**—ಗಂಡಿಯನ್ನು ಹಿಡಿದು, ಒಂದು ಕೊಂಬು ಸುರವನ್ನು ಕುಡಿಸಿ ಮತ್ತೊಂದು ಕೊಂಬನ್ನು ನಾಳೆ 'ಕೊಡುವೆವೆಂದು ಆಶೆ ಹುಟ್ಟಿಸಿ, 'ಜಬಲನು ಸಿಂಹನಿಗಾಗಿ ಗಂಡಿಯ ಕೈಲಿ ಕಳುಹಿಸಿದ'ಂತೆ ಬಾಳೆಯ ಹಣ್ಣುಗಳನ್ನು ಅವನ ಕೈಗೆ ಕೊಟ್ಟು ಕಳುಹಿಸುವುದು.

**ಮಯೂರ**—ವಿಷ ?

**ಇಂದ್ರ**—ಸೂಜಿಯಲ್ಲಿ ಅದರ ಒಂದು ತುದಿಯಿಂದ ಒಳಕ್ಕೆ ತುಂಬುವುದು.

**ಮಯೂರ**—ಒಳ್ಳೆಯ ಉಪಾಯವಿದು, ಇಂದ್ರಸೇನ !....ಆದರೆ ಜಬಲನು ಅಲ್ಲಿಗೆ ಬರುವ ವೇಳೆಗೆ ಅವನು ಹಣ್ಣನ್ನು ತಿಂದುಬಿಟ್ಟಿರಬೇಕು ಬಹಳ ಒಳ್ಳೆಯ ಉಪಾಯ ನೀನು ಹೊರಡು ಜಾಗ್ರತೆ—

[ಹೊರಡುವರು]

**ದೃಶ್ಯ ೬**

(ಸಿಂಹನನ್ನು ಹಿಡಿದುಕೊಂಡು ರಾಜನ ಪರಿವಾರದವರು ಬರುತ್ತಿರ

ವರು. ದಾರಿ–ಗುಡ್ಡಗಳ ನಡುವೆ ; ಅಷ್ಟರಲ್ಲೇ ಇಂದ್ರಸೇನನುಪ್ರವೇಶಿಸು ವನು)

**ಇಂದ್ರ**—ನಡೆಯಿರಿ. ಹೊತ್ತಾಯಿತು. ಇವನು ಬಾಯಾರಿ ನೀರ ನ್ನಾಗಲೀ ತಿಂಡಿಯನ್ನಾಗಲೀ ಕೇಳಿದರೆ ಕೊಡಕೂಡದೆಂದು ರಾಜರ ಅಪ್ಪಣೆ ಯಾಗಿದೆ. ಅವನು ನಡೆಯಲಾರದೆ ಹೋದರೆ ಎತ್ತಿಕೊಂಡಾದರೂ ನಡೆ ಯಿರಿ.

[ಅಷ್ಟರಲ್ಲೇ ಎದುರು ಕಡೆಯಿಂದ ಗಂಡಿಯು ಪ್ರವೇಶಿಸುವನು]

**ಗಂಡಿ**—ತಡೆಯಿರಿ! ಯಾರದು ಸಿಂಹನನ್ನು ಬಂಧಿಸಿರುವವರು ?

**ಇಂದ್ರ**—ಬಾಯಿ ಮುಚ್ಚಿಕೊಂಡು ಹೊರಡು. ಗಂಡೀ! ರಾಜರ ಅಪ್ಪಣೆಯಂತೆ ಇವನನ್ನು ಕಣಿವೆಗೆ ತಳ್ಳಲು ಕರೆದೊಯ್ಯುತ್ತಿದ್ದೇವೆ.

**ಗಂಡಿ**—ಅಯ್ಯೋ! ಸಿಂಹ! ನಿನಗೆ ಈ ಶಿಕ್ಷೆಯೆ! ಇದನ್ನು ಕೇಳಿ ಗೋಳಾಡುತ್ತಿರುವ ನಿಮ್ಮ ತಂದೆಯ ರೋದನವು ಈ ಪಾಪಿಗಳನ್ನು ಸುಡದೇ !

**ಸಿಂಹ**—ಇದೇನು ? ಗಂಡಿ! ನಿನ್ನ ಮಂದಹೃದಯವನ್ನೂ ಸ್ವಾತಂತ್ರ್ಯದ ಕಿಡಿಯು ಹೊಕ್ಕು ಬೆಳಗುತ್ತಿರುವುದೇ! ...ಭಲಾ

**ಗಂಡಿ**—ಸಿಂಹ! ಆ ನಿಮ್ಮ ತಂದೆಯ ಮಮತೆಯಾದರೂ ನಿನ್ನ ಮನಸ್ಸನ್ನು ತಾಗದೇನೋ ?

**ಸಿಂಹ**—ನಮ್ಮ ತಂದೆಯೋ ? ...ಎಲ್ಲಿರುವರು ? ಹೇಗಿರುವರು ?

**ಇಂದ್ರ**—ಗಂಡೀ! ಏನಿದು ? ವ್ಯರ್ಥವಿಲಾಪ!! (ಸನ್ನೆಮಾಡುವನು)

**ಗಂಡಿ**—ಸಿಂಹ! ನಿನ್ನ ಮರಣದಂಡನೆಯನ್ನು ಕೇಳಿ ಮನೆಯಲ್ಲೇ ಕುಳಿತು ಗೋಳಾಡುತ್ತಿರುವ ನಿಮ್ಮ ತಂದೆಯು, ಅವನ ಪ್ರೇಮವನ್ನು ತೋರಿಸಲಿಕ್ಕಾಗಿ ಈ ಬಾಳೆಯ ಹಣ್ಣುಗಳನ್ನು ನಿನಗಾಗಿ ಕಳುಹಿಸಿರುವನು. ತೆಗೆದುಕೋ! ಸಿಂಹ!! ಅವನ ಪ್ರೇಮ ಬಾಷ್ಪವು ಇದರಲ್ಲಡಗಿದೆ-ಇದರಿಂದ ನಿನ್ನ ದಾಹವಡಗುವುದು.

[ಬಟ್ಟೆಯಲ್ಲಿ ಸುತ್ತಿದ್ದ ಬಾಳೆಯ ಹಣ್ಣುಗಳನ್ನು ಕೊಡುವನು]

**ಇಂದ್ರ**—ಇವನಿಗೆ ಯಾವ ವಿಧವಾದ ತಿಂಡಿಯನ್ನಾಗಲೀ, ನೀರನ್ನಾಗಲೀ ಕೊಡಕೂಡದೆಂದು ರಾಜಾಜ್ಞೆಯಾಗಿದೆ ಗಂಡೀ!

**ಗಂಡಿ**—ನಿನ್ನ ರಾಜಾಜ್ಞೆಯನ್ನು ಸುಡು! ಮರಣವನ್ನೆದುರಿಸಲು ಹೋಗುತ್ತಿರುವ ನಿರಪರಾಧಿಗೆ ನೀರನ್ನು ಕೊಡಕೂಡದೆಂದು ಹೇಳಿದ ಈ.... ನಿಮ್ಮ ರಾಜನ ಕಿಚ್ಚೆಷ್ಟೋ?

**ಇಂದ್ರ**—ತಲೆಯೆಲ್ಲಾ ಹರಟಬೇಡ!-ಬೇಕಾದರೆ ಆ ಹಣ್ಣುಗಳನ್ನು ಅವನು ತಿನ್ನಲಿ. ನಿನ್ನ ದಾರಿ ಹಿಡಿ.

**ಗಂಡಿ**—ಇರಲಿ! ಅವನು ತಿನ್ನುವುದನ್ನು ನೋಡಿ ಹೋಗಿ. ಸಂತೋಷದಿಂದಲೂ, ವಿಶ್ವಾಸದಿಂದಲೂ ತಿಂದನೆಂದು ಜಬಲನಿಗೆ ತಿಳಿಸಬೇಕು

**ಸಿಂಹ**—ವಿಶ್ವಾಸದಿಂದ ತಿನ್ನುವೆನು—ಗಂಡೀ! ಆದರೆ ನಮ್ಮ ತಂದೆಯೂ ರಾವಲನಾಗಬೇಕೆಂದು ನನ್ನ ಇಚ್ಛೆ.

[ಎಂದು ಹೇಳಿ ಹಣ್ಣುಗಳನ್ನು ಸುಲಿದು ತಿನ್ನುತ್ತಿರುವನು]

(ಅಷ್ಟರಲ್ಲೇ ಹಿಂದಿನಿಂದ ಬಣ್ಣಮನು 'ತಡೀ! ಸಿಂಹ! ತಿನ್ನಬೇಡ! ವಿಷಪೂರಿತವಾದ ಹಣ್ಣುಗಳು! ಮೋಸ! ಮೋಸ! ಎಂದು ಕೂಗುತ್ತಾ ಹಲವು ರಾವಲರೊಡಗೂಡಿ ಬರುವನು)

**ಸಿಂಹ**—ಯಾರದು? ವಿಷಪೂರಿತವಾದ ಹಣ್ಣೆಂದು ಕೂಗಿದವರು? ನಮ್ಮ ತಂದೆಯು ನನಗೆ ಈ ಸಮಯದಲ್ಲಿ ವಿಷವನ್ನು ನುಂಗಿಸುವನೇ? ....ಇದೇನು ಹೊಟ್ಟೆಯಲ್ಲಿ ಸಂಕಟವಾಗುತ್ತಿದೆ?

**ಬಣ್ಣಮ**—(ಓಡಿಬಂದು ಸಿಂಹನನ್ನು ಅಪ್ಪಿ) ಅಯ್ಯೋ! ಮಗನೆ! ಸಿಂಹ! ನಿನಗೆ ಇಂತಹ ದುರ್ಮರಣವೇ! ಆ ವಿಷಪೂರಿತವಾದ ಹಣ್ಣುಗಳನ್ನು ತಿಂದುಬಿಟ್ಟಿರುವೆಯಲ್ಲಾ?

**ಸಿಂಹ**—ಗುರುವರ್ಯ! ನಿಜ! ವಿಷಪೂರಿತವಾದ ಹಣ್ಣುಗಳು. ಹೊಟ್ಟೆಯು ಉರಿಯುತ್ತಿದೆ .ವಿಷ! ವಿಷ!....ನೀರು! ನೀರು!

[ನೆಲಕ್ಕುರುಳುವನು]

**ಬಣ್ಣಮ**—(ತನ್ನವರಿಗೆ) ನೀರನ್ನು ತನ್ನಿ! ಬೇಗ ತನ್ನೀ! ಅವನೆಲ್ಲಿ

ಆ ಪಾಪಿ ಗಂಡಿ? (ಸುತ್ತಲೂ ನೋಡಿ ಇಲ್ಲದಿರುವುದನ್ನು ಕಂಡು) ಓಡಿ! ಅವನೆಲ್ಲಿದ್ದರೂ ಸರಿ, ಹಿಡಿದು ತನ್ನಿರಿ! ನಡೆಯಿರಿ!

**ಸಿಂಹ**—ಅಪ್ಪಾಜೀ! ನೀರು! ಹೊಟ್ಟೆಯುರಿಯುತ್ತಿದೆ ;—ನಿಜ! ವಿಷದ ಹಣ್ಣುಗಳು. ನೀವೇ ಕೈಯಾರ ಕೊಲ್ಲುವಿರಾ? ಅಪ್ಪಾಜೀ!

**ಬಣ್ಣಮ**—ಸಿಂಹ! ರಾವಲಮಾತೆಯ ವೀರಪುತ್ರನೇ!...ಆಹಣ್ಣುಗಳು ನಿಮ್ಮ ತಂದೆಯು ಕಳುಹಿಸಿದವಲ್ಲ! ಈದ್ರೋಹಿಗಳ ಕೃತ್ರಿಮ.

**ಸಿಂಹ**—ಹೊಟ್ಟೆಯುರಿಯುತ್ತಿದೆ!....ನೀರು! ನೀರು!

[ನೀರನ್ನು ತರುವರು]

**ಬಣ್ಣಮ**—(ಸಿಂಹನಿಗೆ ಕುಡಿಸುತ್ತಾ) ಸಿಂಹ! ಕುಡಿ! ರಾವಲಮಾತೆಯ ಪುಣ್ಯತೀರ್ಥ. ಜೈ ರಾವಲಮಾತೇ!

**ಸಿಂಹ**—(ಎದ್ದು ಕುಳಿತು ಕೈಗಳನ್ನು ಬೀಸಿ) ಜೈ ರಾವಲಮಾತೇ!

[ಮತ್ತೆ ಮಲಗುವನು]

**ಜಬಲ**—(ಉನ್ಮತ್ತನಂತೆ ಪ್ರವೇಶಿಸುತ್ತಾ) ಸಿಂಹಾ! ಮಗನೇ! ನನ್ನ ಮುದ್ದು ಸಿಂಹಾ!!

**ಸಿಂಹ**—(ಎದ್ದು ಪ್ರಯಾಸದಿಂದ ಬಣ್ಣಮನನ್ನು ಒರಗಿ ಕುಳಿತು) ಅಪ್ಪಾಜೀ! ಬಂದಿರಾ! ಬನ್ನೀ! ಬನ್ನೀ! ಸಿಂಹನು ಈ ಗುಲಾಮ ದೇಹವನ್ನು ಕಿತ್ತೊಗೆದು ಸ್ವತಂತ್ರ ರಾವಲ ನಾಡಿನಲ್ಲಿ ಮತ್ತೆ ಹುಟ್ಟಲು ಹೋಗುತ್ತಿರುವನು!....ಜೈ ರಾವಲ ಮಾತೆ! (ಕತ್ತು ಓರೆಯಾಗಿ ಜಾರುವುದು. ಬಣ್ಣಮನು ಎದೆಗೆ ಒರಗಿಸಿಕೊಳ್ಳುವನು).

**ಜಬಲ**—(ಹತ್ತಿರ ಬಂದು ಅಪ್ಪುತ್ತಾ, ಕೈಗಳನ್ನು ಹಿಡಿದು) ಸಿಂಹ! ಈ ದೇಹವನ್ನು ಕಿತ್ತೊಗೆಯುವೆಯಾ? ಮಗನೇ! ಯಾರೇನು ಮಾಡಿದರು? ಮುದ್ದು ಸಿಂಹ! ಹೀಗೇಕೆ ಬಳಲುತ್ತಿರುವೇ?

**ಬಣ್ಣಮ**—ಈ ರಾಜರು ಮೋಸಮಾಡಿ ಗಂಡಿಯ ಕೈಲಿ ವಿಷಪೂರಿತವಾದ ಹಣ್ಣನ್ನು ಕಳುಹಿಸಿ ನೀವು ಕಳುಹಿಸಿದರೆಂದು ಹೇಳಿ ತಿನ್ನಿಸಿರುವರು. ಇವರ ಸಂಚನ್ನು ತಿಳಿದು ನಾನು ತಪ್ಪಿಸಲೋಡಿಬರುವವೇಳಗೆ ಈ ಅಸಂಗತವಾಗಿ ಹೋಗಿದೆ.

**ಜಬಲ**—ಅಯ್ಯೋ! ಸಿಂಹನಿಗೆ, ನನ್ನ ಮುದ್ದು ಕಂದನಿಗೆ ವಿಷವನ್ನು ಕೊಟ್ಟರೇ!....ಎಲಾ! ಹೇಡಿಗಳೇ! ದ್ರೋಹಿಗಳೇ!-ಆ ಗಂಡಿಯೆಲ್ಲಿ-ಆ ಪಾಪಿಯೆಲ್ಲಿ? ಅವನನ್ನು ಜೀವಸಹಿತ ಹಿರಿದು ನರಿಗಳಿಗೆ ಆಹುತಿ ಕೊಡುತ್ತೇನೆ-ಎಲ್ಲಿ! ಆ ರಾಕ್ಷಸ!....

**ಬಣ್ಣಮ**—ಅವನನ್ನು ಹಿಡಿದು ತರಲು (ಸುತ್ತಲೂ ನೋಡುವನು) ನಮ್ಮವರನ್ನು ಕಳುಹಿಸಿದ್ದೇನೆ.

**ಸಿಂಹ**—[ಮೆಲ್ಲಗೆ ಕಣ್ಣುಬಿಟ್ಟು] ಅಪ್ಪಾಜೀ!-ಅಪ್ಪಾಜೀ!

**ಜಬಲ**—(ಕೈಗಳನ್ನು ಹಿಡಿದು) ಸಿಂಹ! ನನ್ನ ಮುದ್ದುಕಂದ ಹೀಗೇಕೆ ಕಣ್ಣುಗಳನ್ನು ತಿರುಗಿಸುತ್ತೀ?

**ಸಿಂಹ**—ನಿಮ್ಮ ಹೃದಯದಲ್ಲಿ ರಾವಲ ಮಾತೆಯ ಗೋಳು ತಟ್ಟಲೆಂದು.

**ಜಬಲ**—ತಟ್ಟುತ್ತಿರುವುದು! ಸಿಂಹ! ಮಗನೇ! ನೀನು ನನ್ನನ್ನು ಬಿಟ್ಟು ಹೊರಟು ಹೋಗುವೆಯಾ! . ಕಂದಾ! (ಗೋಳಾಡುವನು)

**ಸಿಂಹ**—ಸ್ವತಂತ್ರ ರಾವಲನಾಗಿ ಹುಟ್ಟಲು ಹೋಗುತ್ತಿದ್ದೇನೆ....ನನ್ನ ಕೊನೆಯಮಾತು; ಅಪ್ಪಾಜೀ! ನನ್ನ ಕೊನೆಯ ಬೇಡಿಕೆ ನಿಮಗೆ ನನ್ನ ವಿಷಯದಲ್ಲಿ ಪ್ರೇಮವಿದ್ದರೆ, ನಿಮ್ಮ ಈ ಗುಲಾಮಗಿರಿಯನ್ನು ಕಿತ್ತೊಗೆದು ರಾವಲರ ಸ್ವಾತಂತ್ರ ಸಾಧನೆಗೆ, ಈ ದ್ರೋಹಿಗಳನ್ನು ಹೊಡೆದೋಡಿಸುವುದಕ್ಕೆ ಕಂಕಣ ಕಟ್ಟಿರಿ ...ಅಪ್ಪಾಜೀ!....ಅಪ್ಪಾಜೀ! ಕೂಗಿರಿ! ನನ್ನ ಕಿವಿಯಲ್ಲಿ! ಜೈ ರಾವಲಮಾತೆ ಎಂದು ಕೂಗಿ ..ಅಪ್ಪಾಜಿ! ಅಪ್ಪಾಜಿ! ನನ್ನ ವಿಷಯದಲ್ಲಿ ಅಷ್ಟು ದಯವಿಲ್ಲವೆ? ಅಪ್ಪಾಜೀ' ಜೈ ರಾವಲ ಮಾತೆ!—(ಪ್ರಾಣಬಿಡುವನು)

**ಜಬಲ**—(ಉನ್ಮತ್ತನಾಗಿ ಕೂಗುತ್ತಾ) ಸಿಂಹಾ! ಸಿಂಹಾ! ನನ್ನ ಮುದ್ದು ಸಿಂಹಾ! . ಅಯ್ಯೋ!.... ಹೊರಟು ಹೋದೆಯಾ!! ನನ್ನನ್ನು ಬಿಟ್ಟು ಎಲ್ಲಿಗೆ ಹೋದೇ! ..ಅಯ್ಯೋ ನನ್ನ ಮುದ್ದು ಕಂದ! ಮಗನೇ ನನ್ನ ಚಿನ್ನಾ! ...

[ಹೆಣವನ್ನಪ್ಪಿ ಗೋಳಾಡುವನು]

**ಬಣ್ಣಮ**—ಜಬಲಾ! ರಾವಲರ ಹಿಂದಿನ ಸ್ವಾತಂತ್ರ್ಯವನ್ನು ಸಂಪಾ

ಡಿಸುವುದು ಪ್ರತಿಯೊಬ್ಬನ ಕರ್ತವ್ಯ. ಅದಕ್ಕಾಗಿ ಸಿಂಹನೊಬ್ಬನಲ್ಲ, ನಾನು, ನೀನು, ನಮ್ಮಂತೆ ಇನ್ನೂ ನೂರಾರು ಜನರು ಪ್ರಾಣ ಕೊಡಲು ಸಿದ್ಧರಾಗ ಬೇಕು. ಧೀರನಾದ ಸಿಂಹನ ವೀರವಾಣಿಗೆ ಕಿವಿಗೊಟ್ಟು ನಿನ್ನ ಗುಲಾ ಮಗಿರಿಯನ್ನು ಕಿತ್ತೊಗೆ.

[ಮಯೂರವರ್ಮನು ಪರಿವಾರದೊಡನೆ ಬರುವನು]

**ಮಯೂರ**—ಏನಿದು ? ಜಬಲ ! ಮತ್ತೆ ಹುಚ್ಚನಂತಾಡುತ್ತಿ ರುವೇ ?.. ಇವನ್ಯಾರು ದುರ್ಬೋಧೆ ಮಾಡುತ್ತಿರುವ ಈ ದ್ರೋಹೀ !

**ಜಬಲ**—[ಎದ್ದು ತಲೆಯನ್ನು ಕೆದರಿ ಸೊಂಟದಿಂದ ಬಾಣವೊಂದನ್ನು ಹಿರಿದು] ಲೋ ಚಂಡಾಲಾ ! ನನಗೆ ಮೋಸಮಾಡಿ ನನ ಮುದ್ದು ಮಗನ ಜೀವವನ್ನು ನುಂಗಿದ ನೀನು ದ್ರೋಹಿಯೋ, ನಿನ್ನನ್ನೂ ಪತಿತರಾದ ನಿನ್ನ ಪರಿವಾರದವರನ್ನೂ ನಮ್ಮ ನಾಡಿನಿಂದೋಡಿಸುವುದು ನಮ್ಮ ಕರ್ತವ್ಯವೆಂದು ಎಚ್ಚರಿಕೆ ಕೊಟ್ಟ ಈ ಸಾಧುವು ದ್ರೋಹಿಯೋ ?

**ಬಣ್ಣಮ**—ಜಬಲಾ ! ಹಿಂದೆ ಬಾ ! ಕ್ರೋಧವನ್ನು ತಡಿ ! ಇನ್ನು ಕಾಲವು ಸಮೀಪಿಸಿಲ್ಲ !

**ಮಯೂರ**—ಹೀಗೋ ಸಮಾಚಾರ ! ಇಂದ್ರಸೇನ ! ಏಕೆ ನೋಡುತ್ತಾ ನಿಂತಿರುವೆ. ಬಂಧಿಸಿರಿ ಅವರಿಬ್ಬರನ್ನೂ !

[ಇಂದ್ರಸೇನನೂ ಪರಿವಾರದವರು ಬಂದು ಜಬಲ, ಬಣ್ಣಮ್ಮರನ್ನು ಬಂಧಿಸುವರು—ರಾವಲರು ಮುಂದೆ ಬಂದು ನಿಲ್ಲುವರು]

**ಬಣ್ಣಮ**—ಸೋದರರೆ ! ನನ್ನ ಎಚ್ಚರಿಕೆಯು ಮನಸ್ಸಿನಲ್ಲಿರಲಿ, ದುಡುಕಬೇಡಿ.

[ರಾವಲರು ಹಿಂದೆ ಸರಿಯುವರು]

(ಅಷ್ಟರಲ್ಲೇ ಇಂದ್ರಸೇನನ ಪರಿವಾರದವನೊಬ್ಬನು ಓಡಿಬಂದು) ಮಹಾರಾಜರೇ ! ಸಾವಿರಾರು ರಾವಲರು ಬಂದು ನಮ್ಮ ಗುಡ್ಡವನ್ನು ಮುತ್ತಿ ಅಲ್ಲಿದ್ದವರನ್ನು ಓಡಿಸುತ್ತಿರುವರು. ಅವರನ್ನು ಸೋನನೆಂಬುವನು ಮುಂದೆ ನಿಂತು ನುಗ್ಗಿಸಿಕೊಂಡು ಬರುತ್ತಿರುವನು.

**ಮಯೂರ**— ಇಂದ್ರಸೇನ! ಏನಿದು ಅನ್ಯಾಯವು ಅಸಂಗತ! ನಡೀ! ಓಡಿರಿ!....ಅವರನ್ನು ಎಳೆದುಕೊಂಡು ಬನ್ನಿರಿ.

(ಗಾಬರಿಯಿಂದ ಸರಸರನೆ ಮುಂದೆ ಹೊರಡುವನು—ಇಂದ್ರಸೇನನು ಹಿಂಬಾಲಿಸುವನು— ಪರಿವಾರದವರು ಜಬಲ, ಬಣ್ಣಮನನ್ನು ಎಳೆದು ಕೊಂಡು ಹೋಗುವರು] - ಒಳಗೆ 'ಜೈ! ರಾವಲಮಾತೇ! ಜೈ ರಾವಲ ಮಾತೇ!' ಎಂದು ಸಾವಿರಾರು ಜನರ ಜಯಕಾರ ಧ್ವನಿಯು ಕೇಳಿಸುವುದು)

॥ ಸಂಪೂರ್ಣ ॥

## ಟಿ. ಸದಾಶಿವಯ್ಯನವರ ಇತರ ಕೃತಿಗಳು

| | |
|---|---|
| ಸೌಭಾಗ್ಯ | (ನಾಟಕ) |
| ಮಕ್ಕಳೇ ದೇವರು | ,, |
| ಸೊಂಪಿನ ಸಾಗರ | ,, |
| ಭೀಮಸೇನ ಬೇಬಿ | ,, |
| ಶಿವಾಜಿಯ ಬಾಲ್ಯ | ,, |
| ಮೈಸೂರ ಮಾಣಿಕ್ಯ | ,, |
| ಅಮ್ಮ | ,, |
| ಶಿವಮಂಗಳ | ,, |
| ಜಯ ಶ್ರೀ | ,, |
| ಶಾಂತಿ | ,, |
| ಕನ್ಯಾಸೆರೆ | ,, |
| ಮಾಂಗಲ್ಯ | ,, |
| ರಹಸ್ಯ | ,, |
| ಸಿಂಹ (ಸ್ವಾತಂತ್ರ್ಯ ಘರ್ಜನೆ) | ,, |
| ಬೃಂದಾವನ | ,, |
| ಉಗಾದಿಯ ಸಡಗರ | ,, |
| ರಾಮದರ್ಶನ | ,, |
| ತಂಗಚ್ಚಿ | ,, |
| ಆಮೇಲೆ | ,, |
| ಏಕನಾಥ | (ಕಥೆಗಳು) |
| ಲೀಲೂಗಂಡ | ,, |
| ಪ್ರತೀಕ್ಷೆ | ,, |
| ಮೈಸೂರು ಹುಲಿ | ,, |
| ಸ್ವಾಮಿ ರಾಮತೀರ್ಥ | (ಜೀವನ ಚರಿತ್ರೆ |
| ರಾಜಶ್ರೀ | (ಕಾದಂಬರಿ) |



## ಚಿ. ಸದಾಶಿವಯ್ಯ

ಾಶಿವಯ್ಯನವರ ಮೊದಲನೇ ನಾಟಕವಾದ "ಮೈಸೂರ ಶ್ರೀ ಸ ೯೨೭ರಲ್ಲಿ ಬೆಳಕಿಗೆ ಬಂದು ಅಂದಿನ ನಾಟಕಪ್ರೇಮಿಗಳ ಆದ ಮಾಣಿಕ್ಯ" ್ರವಾಗಿ ಮೆಚ್ಚುಕೆ ಪಡೆಯಿತು ಆ ಉತ್ತೇಜನದಿಂದ ಪ್ರಾರಂಭ ರಕ್ಕೆ ಪಾ ಇವರ ನಾಟಕರಚನೆ ಇದುವರೆಗೂ ನಡೆಯುತ್ತಾ ಬಂದು, ಈ ವೇಳೆಗೆ ವಾದ ಸೂರು ಇಪ್ಪತ್ತು ನಾಟಕಗಳನ್ನು ರಚಿಸಿ, ಆಡಿಸಿ ರಂಗಭೂಮಿಗೆ ಸೇವೆ ಸು್ಸಲ್ಲಿಸಿದ್ದಾರೆ.

ಇವರ ನಾಟಕಗಳನ್ನು ಮದರಾಸು, ಬೊಂಬಾಯಿ, ಕಲ್ಕತ್ತಗಳಲ್ಲಿನ ಕನ್ನಡಿಗರು ಪ್ರೇಮದಿಂದ ಅಭಿನಯಿಸಿ ಅಲ್ಲಿ ನಾಟಕಪ್ರೇಮಿಗಳನ್ನು ತಣಿಸಿದ್ದಾರಲ್ಲದೆ, ಶ್ರೀ ಸದಾಶಿವಯ್ಯನವರೆ ಸ್ವತಃ ತಮ್ಮ ಗೆಳೆಯರೊಂದಿಗೂ ಮತ್ತು ಯುನೈಟೆಡ್ ಆರ್ಟಿಸ್ಟರೊಂದಿಗೂ ಧಾರವಾಡ, ಹುಬ್ಬಳ್ಳಿ, ಗದಗ್, ಆ ಬೆಂಗಳೂರ, ಚಿಕ್ಕಮಗಳೂರು, ಚನ್ನಪಟ್ಣ, ಕೋಲಾರ, ತುಮಕೂರು [redacted]ಳಗಳಲ್ಲೆಲ್ಲಾ ನಮ್ಮ ನಾಟಕಗಳನ್ನು ಅಭಿನಯಿಸಿ ಕೀರ್ತಿಗಳಿಸಿದ್ದಾರೆ. ಇವರ ಹತ್ತಾರು ನಾಟಕಗಳು ಮದ್ರಾಸು, ಮೈಸೂರು ರೇಡಿಯೋ ಕೇಂದ್ರಗಳಿಂದ ಪ್ರಸಾರವಾಗಿವೆ ;ಆಗುತ್ತಿವೆ.

ಮಕ್ಕಳ (ಕಿರಿಯರ) ನಾಟಕಗಳನ್ನು ರಚಿಸುವುದರಲ್ಲಿ ಇವರಿಗೆ ಪ್ರೇಮ ಯ್ಯನವರು ತಮಗೆ ಸಹಜವಾದ ಲಲಿತ ಶೈಲಿಯಲ್ಲಿ ಅನೇಕ ಚಿಕ್ಕ ಳನ್ನು ಬರೆದು ಬಾಲಕವರ್ಗಕ್ಕೆ ಉಪಕಾರ ಮಾಡಿದ್ದಾರೆ.

ಆನಂದ್ ಬ್ರದರ್ಸ್ : : ಬೆಂಗಳೂರು ೨